# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – V | ಬೆಂಗಳೂರು, ಶನಿವಾರ, ನವೆಂಬರ್ ೧೭, ೨೦೧೨ (ಕಾರ್ತೀಕ ೨೬, ಶಕ ವರ್ಷ ೧೯೩೪) | ನಂ. ೮೨೯ |
|---|---|---|

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕವಿಸಸ/ಆ–1/200/ಶೀ.ನೇ.ನೇ./2012, ಬೆಂಗಳೂರು, ದಿನಾಂಕ: 17.11.2012**

**ವಿಷಯ :** ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿ ಶೀಘ್ರಲಿಪಿಗಾರರ ಹುದ್ದೆಗಳನ್ನು ನೇರ ನೇಮಕಾತಿಯ ಮೂಲಕ ಭರ್ತಿ ಮಾಡುವ ಬಗ್ಗೆ.

ಕರ್ನಾಟಕ ವಿಧಾನ ಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 2003 ಹಾಗೂ ತಿದ್ದುಪಡಿ ನಿಯಮಾವಳಿ 2009ರಡಿಯಲ್ಲಿ ಕರ್ನಾಟಕ ವಿಧಾನಸಭೆ ಸಚಿವಾಲಯದ ಶೀಘ್ರಲಿಪಿಗಾರರ ಹುದ್ದೆಗಳಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ವಿವರಗಳು ಈ ಕೆಳಕಂಡಂತಿರುತ್ತವೆ.

**ಹುದ್ದೆಯ ಹೆಸರು :** **ಶೀಘ್ರಲಿಪಿಗಾರರು**

**ಹುದ್ದೆಗಳ ಸಂಖ್ಯೆ :** **03 ಹುದ್ದೆಗಳು**

**ವೇತನ ಶ್ರೇಣಿ :** **ರೂ. 16000–400–17200–450–19000–500–21000–600–24600–700–28800–800–29600**

| | ಮೀಸಲಾತಿ ವರ್ಗೀಕರಣ | ಸಮತಳ ಮೀಸಲಾತಿ ವರ್ಗೀಕರಣ | | | | | |
|---|---|---|---|---|---|---|---|
| ಕ್ರ. ಸಂ. | ಮೀಸಲಾತಿ | ಸಾಮಾನ್ಯ ಅರ್ಹತೆ | ಕನ್ನಡ ಮಾಧ್ಯಮ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ | ಖಾಲಿ ಇರುವ ಒಟ್ಟು ಹುದ್ದೆಗಳ ಸಂಖ್ಯೆ |
| 1. | ಸಾಮಾನ್ಯ | –– | –– | –– | 01 | –– | 01 |
| 2. | ಪ್ರವರ್ಗ–I | –– | –– | –– | 01 | –– | 01 |
| 3. | II ಎ | –– | –– | –– | 01 | –– | 01 |

1. **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 21.12.2012**
2. ಅರ್ಜಿ ಸಲ್ಲಿಸಬೇಕಾದ ವಿಳಾಸ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ: 5074, ಮೊದಲನೆ ಮಹಡಿ, ವಿಧಾನ ಸೌಧ, ಬೆಂಗಳೂರು–560 233.
3. ಕರ್ನಾಟಕ ವಿಧಾನ ಸಭೆ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳನುಸಾರ ಮೇಲ್ಕಂಡ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳು ಅರ್ಜಿ ನಮೂನೆ–1ರ ದ್ವಿಪ್ರತಿಯಲ್ಲಿ ಅರ್ಜಿಗಳನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದ ಪಡೆದು ವಿಧಾನಸಭೆ ಸಚಿವಾಲಯಕ್ಕೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಲ್ಲಿಸಬೇಕು. (ಅರ್ಜಿ ನಮೂನೆಯು ಸರ್ಕಾರಿ ಮುದ್ರಣಾಲಯದಲ್ಲಿ ದೊರೆಯುವುದು).

**4. ವಿದ್ಯಾರ್ಹತೆ** ಃ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ ಅಭ್ಯರ್ಥಿಗಳು ನೇರ ನೇಮಕಾತಿಗೆ ಅರ್ಹತೆಯನ್ನು ಪಡೆದಿರಬೇಕು ಹಾಗೂ ಅವನು / ಅವಳು ಕೆಳಗೆ ತಿಳಿಸಿರುವ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.

| ಕ್ರ. ಸಂ. | ಹುದ್ದೆಯ ಹೆಸರು | ವಿದ್ಯಾರ್ಹತೆ |
|---|---|---|
| 1 | **ಶೀಘ್ರಲಿಪಿಗಾರರು** | 1. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಪ್ರೌಢ ದರ್ಜೆಯ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಹಾಗೂ ಶೀಘ್ರಲಿಪಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕು.<br>2. ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿತವಾದ ಯಾವುದೇ ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಪದವಿ ಹೊಂದಿರಬೇಕು. ಗಣಕ ಯಂತ್ರದ ಸಾಮಾನ್ಯ ಜ್ಞಾನವನ್ನು ಹೊಂದಿದವರಿಗೆ ಆದ್ಯತೆಯನ್ನು ನೀಡಲಾಗುವುದು. |

**5. ವಯೋಮಿತಿಃ** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿಃ–**

| | | |
|---|---|---|
| ಸಾಮಾನ್ಯ ವರ್ಗ | ಃ | 35 ವರ್ಷ |
| ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ | ಃ | 38ವರ್ಷ |
| ಪ.ಜಾ. / ಪ.ಪಂ. / ಪ್ರವರ್ಗ–I | ಃ | 40 ವರ್ಷ |

**6.** ಸರ್ಕಾರಿ ಇಲಾಖೆಗಳಲ್ಲಿ ಈಗಾಗಲೇ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಗಳನ್ನು ತಮ್ಮ ನೇಮಕಾತಿ ಪ್ರಾಧಿಕಾರದ ಮೂಲಕವೇ ನಿಗದಿತ ದಿನಾಂಕದೊಳಗೆ ಸಲ್ಲಿಸಬೇಕು.

**7.** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ, ರಾಜ್ಯ ಸಿವಿಲ್ ಸೇವೆಗಳಲ್ಲಿ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹತೆ ಹೊಂದಿರುವ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗಿರುತ್ತಾರೆ.

**8.** (1) ಆಯ್ಕೆಯಾದ ಯಾವುದೇ ಅಭ್ಯರ್ಥಿಯು, ನೇಮಕಾತಿ ಪ್ರಾಧಿಕಾರಕ್ಕೆ ಅವನು / ಅವಳು ನೇಮಿಸಿರುವ ಕೆಲಸಕ್ಕೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಯೋಗ್ಯವೆನಿಸಿದ ಹೊರತು ಅವನನ್ನು / ಅವಳನ್ನು ಆ ಹುದ್ದೆಗೆ ನೇಮಿಸಲಾಗುವುದಿಲ್ಲ.

(2) ಸಕ್ಷಮ ನೇಮಕಾತಿ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**9.** ಯಾವುದೇ ವ್ಯಕ್ತಿಯು ತನ್ನ ಉಮೇದುವಾರಿಕೆ ಬಗ್ಗೆ ಅಧಿಕಾರಿಗಳು ಮತ್ತು ಅಧಿಕಾರೇತರರುಗಳಿಂದ ಯಾವುದೇ ರೀತಿಯ ಒತ್ತಡ ತಂದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ಅರ್ಹನಾಗುವುದಿಲ್ಲ.

**10. ಶುಲ್ಕಃ** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–I ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಇರುವುದಿಲ್ಲ. ಉಳಿದ, ಸಾಮಾನ್ಯ ವರ್ಗದ ಮತ್ತು ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳು ಕ್ರಾಸ್ ಮಾಡಿದ ರೂ.25.00ರ ಇಂಡಿಯನ್ ಪೋಸ್ಟಲ್ ಆರ್ಡರನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ 30 ದಿನಗಳೊಳಗಿರುವಂತೆ ಖರೀದಿಸಿ, ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಮೊದಲನೆ ಮಹಡಿ, ವಿಧಾನಸೌಧ, ಬೆಂಗಳೂರು–560 233 ಈ ವಿಳಾಸಕ್ಕೆ ಪಾವತಿ ಮಾಡಬೇಕು. ಅರ್ಜಿ ಶುಲ್ಕವನ್ನು ಒಮ್ಮೆ ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

**11.** ಅಭ್ಯರ್ಥಿಗಳು ಅರ್ಜಿಯೊಂದಿಗೆ ಈ ಕೆಳಗೆ ತಿಳಿಸಲಾಗಿರುವ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ದ್ವಿಪ್ರತಿಗಳಲ್ಲಿ ತಪ್ಪದೇ ಲಗತ್ತಿಸಬೇಕು.

(ಅ) ಹುಟ್ಟಿದ ತಾರೀಖಿಗೆ ಆಧಾರದ ದಾಖಲೆ ಪ್ರತಿ. (ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಶಾಲಾ ವರ್ಗಾವಣೆ ಪತ್ರ (ಟಿ.ಸಿ.))

(ಆ) ವಿದ್ಯಾರ್ಹತೆಗೆ ಸಂಬಂಧಿಸಿದಂತೆ ಎಲ್ಲಾ ವರ್ಷಗಳ ಪದವಿ ಪರೀಕ್ಷೆಯ ಅಂಕಪಟ್ಟಿಗಳ ನಕಲು ಪ್ರತಿಗಳೊಂದಿಗೆ.

(ಇ) **ಹುದ್ದೆಗೆ ಸೂಚಿಸಲಾಗಿರುವ ವಿದ್ಯಾರ್ಹತೆಗಳಿಗೆ ಸಂಬಂಧಿಸಿದ ಪದವಿ ಪ್ರಮಾಣ (*Convocation Certificate*) ಪತ್ರದ ನಕಲು ಪ್ರತಿ ಮತ್ತು ಇತರೆ ವಿದ್ಯಾರ್ಹತೆಯ ಪ್ರಮಾಣ ಪತ್ರದ ನಕಲು ಪ್ರತಿ (ಅಂಕಪಟ್ಟಿಗಳ ನಕಲು ಪ್ರತಿಗಳ ಸಮೇತ).**

(ಈ) ಮಾನ್ಯತೆ ಪಡೆದ ಸಂಸ್ಥೆಯಿಂದ ಗಣಕಯಂತ್ರದ ತರಬೇತಿಯ ಪ್ರಮಾಣ ಪತ್ರದ ನಕಲು ಪ್ರತಿ.

(ಉ) ಜಾತಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸರ್ಕಾರದಿಂದ ನಿಗದಿಪಡಿಸಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

**ಸೂಚನೆಃ– ಅಭ್ಯರ್ಥಿಗಳು ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸಬಾರದು.**

**12.** ಅರ್ಜಿಗಳನ್ನು ನಮೂನೆ 1 ರ ದ್ವಿಪ್ರತಿಯಲ್ಲಿ ಅಗತ್ಯವುಳ್ಳ ದಾಖಲೆಗಳನ್ನು ಲಗತ್ತಿಸಿ, ಕೊನೆಯ ದಿನಾಂಕಃ 21.12.2012 ರಂದು ಸಂಜೆ 4–00 ಗಂಟೆಯ ಒಳಗಾಗಿ ಖುದ್ದಾಗಿ ಅಥವಾ ಅಂಚೆಯ ಮೂಲಕ ತಲುಪಿಸತಕ್ಕದ್ದು, ಸದರಿ ದಿನಾಂಕವು ಸಾರ್ವಜನಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನದಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

**13.** ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿ 2003ರ ರೀತ್ಯಾ ಹುದ್ದೆಗಳ ಆಯ್ಕೆ ಪ್ರಕ್ರಿಯೆಯ ಕಾರ್ಯ ವಿಧಾನವನ್ನು ನಿಗದಿಪಡಿಸುವ ಅಧಿಕಾರ ಮಾನ್ಯ ಸಭಾಧ್ಯಕ್ಷರವರಿಗೆ ಇರುತ್ತದೆ.

**ವಿಶೇಷ ಸೂಚನೆಃ**

1. **ಅರ್ಜಿಗಳ ಮೇಲೆ ಹುದ್ದೆಯ ಹೆಸರನ್ನು ಹಾಗೂ ಅರ್ಜಿದಾರರ ಹೆಸರು, ತಂದೆಯ ಹೆಸರು ಮತ್ತು ಸರಿಯಾದ ವಿಳಾಸವನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.**
2. **ಅರ್ಜಿಯನ್ನು ಸಲ್ಲಿಸಲು ನೀಡಿರುವ ಕಾಲಾವಧಿಯು ಸರ್ಕಾರಿ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸೇರಿದಂತೆ ಎಲ್ಲಾ ಅಭ್ಯರ್ಥಿಗಳಿಗೂ ಅನ್ವಯವಾಗುವುದು.**
3. **ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದೆ ಇರುವ, ಲೋಪ / ಅಪೂರ್ಣ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**
4. **ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ ನಂತರ ಆ ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.**

ಸಭಾಧ್ಯಕ್ಷರ ಆದೇಶಾನುಸಾರ,

**ಕೆ. ನೂರ್ ಮಹಮದ್**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – *I* | ಬೆಂಗಳೂರು, ಸೋಮವಾರ, ನವೆಂಬರ್ ೧೯, ೨೦೧೨ (ಕಾರ್ತೀಕ ೨೮, ಶಕ ವರ್ಷ ೧೯೩೪ | ನಂ. ೮೩೩ |

## ಸಹಕಾರ ಸಚಿವಾಲಯ

### ಆದೇಶ

**ಸಂಖ್ಯೆ: ಸಇ 188 ಎಂಆರ್‌ಇ 2012, ಬೆಂಗಳೂರು, ದಿನಾಂಕ : 17ನೇ ನವೆಂಬರ್, 2012**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) 1966ರ ಕಲಂ 74(ಡಿ)**ರಲ್ಲಿ ಪ್ರಧಾನ ಮಾಡಲ್ಪಟ್ಟ ಅಧಿಕಾರವನ್ನು ಪ್ರಯೋಗಿಸುತ್ತಾ **ಎಸ್.ಕೆ. ಬೆಳ್ಳುಬ್ಬಿ, ಕೃಷಿ ಮಾರುಕಟ್ಟೆ ಮತ್ತು ಹಜ್ ಹಾಗೂ ವಕ್ಫ್ ಸಚಿವರು, ಕರ್ನಾಟಕ ಸರ್ಕಾರ** ಆದ ನಾನು **ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ** (ನಿಯಂತ್ರಣ ಮತ್ತು ಅಭಿವೃದ್ಧಿ) **(ತಿದ್ದುಪಡಿ) ಅಧಿನಿಯಮ 2009 ರಡಿಯಲ್ಲಿ** ಸರ್ಕಾರದ ಮುಂದೆ ಇತ್ಯರ್ಥಕ್ಕಾಗಿ ಬಾಕಿ ಇರುವ / ದಾಖಲಾಗುವ ಅಪೀಲು ಮತ್ತು ಪುನರೀಕ್ಷಣಾ ಅರ್ಜಿಗಳನ್ನು ಹಾಗೂ ದಾಖಲಾಗುವ ಅಪೀಲುಗಳನ್ನು ವಿಚಾರಣೆ ಮಾಡಿ ನಿರ್ಣಯಿಸಿ, ವಿಲೇ ಮಾಡಲು ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಯವರಿಗೆ ವಿಶೇಷವಾಗಿ ನಿರ್ದೇಶನ ನೀಡಿರುತ್ತೇನೆ. ಈ ಆದೇಶವು ಕೂಡಲೇ ಜಾರಿಗೆ ಬಂದಿದ್ದು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**ಎಸ್.ಕೆ. ಬೆಳ್ಳುಬ್ಬಿ**
ಕೃಷಿ ಮಾರುಕಟ್ಟೆ ಮತ್ತು ಹಜ್
ಹಾಗೂ ವಕ್ಫ್ ಸಚಿವರು,
ಕರ್ನಾಟಕ ಸರ್ಕಾರ

# ವಿಶೇಷ ಪತ್ರಿಕೆ

| ಭಾಗ – ***III*** | ಬೆಂಗಳೂರು, ಬುಧವಾರ, ನವೆಂಬರ್ ೨೧, ೨೦೧೨ (ಕಾರ್ತೀಕ ೩೦, ಶಕ ವರ್ಷ ೧೯೩೪) | ನಂ. ೮೩೪ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ – *I*

**ಸಂಖ್ಯೆ: ಸಿಆಸುಇ 23 ಹೆಚ್‌ಹೆಚ್‌ಎಲ್ 2012, ಬೆಂಗಳೂರು, ದಿನಾಂಕ: 19–11–2012**

ಸರ್ಕಾರವು 2013ನೇ ವರ್ಷಕ್ಕೆ ಮಂಜೂರು ಮಾಡಿರುವ ಸಾರ್ವತ್ರಿಕ ರಜಾ ದಿನಗಳ ಪಟ್ಟಿಯನ್ನು ಸಾರ್ವಜನಿಕ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

ಎಲ್ಲಾ ಎರಡನೇ ಶನಿವಾರ ಮತ್ತು ಭಾನುವಾರಗಳು ಹಾಗೂ ಈ ಕೆಳಕಂಡ ದಿನಗಳು.

| ಕ್ರ. ಸಂ. | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1 | 14–01–2013 | ಸೋಮವಾರ | ಉತ್ತರಾಯಣ ಪುಣ್ಯ ಕಾಲ ಸಂಕ್ರಾಂತಿ ಹಬ್ಬ. |
| 2 | 25–01–2013 | ಶುಕ್ರವಾರ | ಈದ್ ಮಿಲಾದ್ |
| 3 | 26–01–2013 | ಶನಿವಾರ | ಗಣ ರಾಜ್ಯೋತ್ಸವ |
| 4 | 29–03–2013 | ಶುಕ್ರವಾರ | ಗುಡ್ ಫ್ರೈಡೆ |
| 5 | 11–04–2013 | ಗುರುವಾರ | ಚಾಂದ್ರಮಾನ ಯುಗಾದಿ |
| 6 | 23–04–2013 | ಮಂಗಳವಾರ | *ಮಹಾವೀರ ಜಯಂತಿ* |
| 7 | 01–05–2013 | ಬುಧವಾರ | ಕಾರ್ಮಿಕ ದಿನಾಚರಣೆ |
| 8 | 13–05–2013 | ಸೋಮವಾರ | ಬಸವಜಯಂತಿ |
| 9 | 09–08–2013 | ಶುಕ್ರವಾರ | ಖುತುಬ್–ಎ–ರಂಜಾನ್ |
| 10 | 15–08–2013 | ಗುರುವಾರ | ಸ್ವಾತಂತ್ರ ದಿನಾಚರಣೆ |
| 11 | 09–09–2013 | ಸೋಮವಾರ | ವರಸಿದ್ಧಿ ವಿನಾಯಕ ವ್ರತ. |
| 12 | 02–10–2013 | ಬುಧವಾರ | ಮಹಾತ್ಮಗಾಂಧೀ ಜಯಂತಿ |
| 13 | 04–10–2013 | ಶುಕ್ರವಾರ | ಮಹಾಲಯ ಅಮಾವಾಸ್ಯೆ |
| 14 | 14–10–2013 | ಸೋಮವಾರ | ವಿಜಯ ದಶಮಿ |
| 15 | 16–10–2013 | ಬುಧವಾರ | ಬಕ್ರೀದ್ |
| 16 | 18–10–2013 | ಶುಕ್ರವಾರ | ಮಹರ್ಷಿ ವಾಲ್ಮೀಕಿ ಜಯಂತಿ |
| 17 | 01–11–2013 | ಶುಕ್ರವಾರ | ಕನ್ನಡ ರಾಜ್ಯೋತ್ಸವ |
| 18 | 02–11–2013 | ಶನಿವಾರ | ನರಕ ಚತುರ್ದಶಿ |
| 19 | 04–11–2013 | ಸೋಮವಾರ | ಬಲಿಪಾಡ್ಯಮಿ, ದೀಪಾವಳಿ |
| 20 | 14–11–2013 | ಗುರುವಾರ | ಮೊಹರಂ ಕಡೇ ದಿನ |
| 21 | 20–11–2013 | ಬುಧವಾರ | ಕನಕದಾಸ ಜಯಂತಿ |
| 22 | 25–12–2013 | ಬುಧವಾರ | ಕ್ರಿಸ್ ಮಸ್ |

**ಸೂಚನೆ :**

1. ಈ ರಜೆ ಪಟ್ಟಿಯು ಭಾನುವಾರಗಳಂದು ಬರುವ ಮಹಾ ಶಿವರಾತ್ರಿ (10–03–2013), ಡಾ॥ ಬಿ.ಆರ್. ಅಂಬೇಡ್ಕರ್ ಜಯಂತಿ (14–04–2013), ಮಹಾ ನವಮಿ, ಆಯುಧ ಪೂಜೆ (13–10–2013), ರಜಾ ದಿನಗಳನ್ನೊಳಗೊಂಡಿರುವುದಿಲ್ಲ.

2. ಸಾರ್ವತ್ರಿಕ ರಜಾ ದಿನಗಳಲ್ಲಿ ರಾಜ್ಯಾದ್ಯಂತ ಸರ್ಕಾರಿ ಕಚೇರಿಗಳು ಮುಚ್ಚಲ್ಪಡುತ್ತವೆ. ಕಚೇರಿಯ ಜರೂರು ಕೆಲಸವನ್ನು ವಿಲೇವಾರಿ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರುಗಳು ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

3. ಈ ಪಟ್ಟಿಯಲ್ಲಿ ಸೇರಿಸಲಾಗಿರುವ ಮುಸಲ್ಮಾನರ ಹಬ್ಬಗಳು ನಿಗದಿತ ದಿನಾಂಕದಂದು ಬೀಳದಿದ್ದರೆ ಸರ್ಕಾರಿ ಸೇವೆಯಲ್ಲಿರುವ ಮುಸಲ್ಮಾನರಿಗೆ ನಿಗದಿತ ರಜೆಗೆ ಬದಲಾಗಿ ಹಬ್ಬದ ದಿವಸ ರಜಾ ಮಂಜೂರು ಮಾಡಬಹುದು.

4. ದಿನಾಂಕ 17–10–2013 (ಗುರುವಾರ) ತುಲಾ ಸಂಕ್ರಮಣ ಆಚರಿಸಲು ಹಾಗೂ ದಿನಾಂಕ: 16–12–2013 (ಸೋಮವಾರ) ಹುತ್ತರಿ ಹಬ್ಬವನ್ನು ಆಚರಿಸಲು ಕೊಡಗು ಜಿಲ್ಲೆಗೆ ಮಾತ್ರ ಅನ್ವಯವಾಗುವಂತೆ ಸ್ಥಳೀಯ ಸಾರ್ವತ್ರಿಕ ರಜೆಯನ್ನು ಘೋಷಿಸಿದೆ.

5. ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಪ್ರತ್ಯೇಕ ರಜಾ ದಿನಗಳ ಪಟ್ಟಿಯನ್ನು ಬೆಂಗಳೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಪ್ರಕಟಿಸುವರು.

6. ಸಾರ್ವತ್ರಿಕ ರಜೆ ದಿನಗಳ ಜೊತೆಗೆ ರಾಜ್ಯ ಸರ್ಕಾರಿ ನೌಕರರು 2 ದಿವಸಗಳಿಗೆ ಮೀರದಂತೆ 2013ನೇ ವರ್ಷದಲ್ಲಿ ಅಧಿಸೂಚನೆ ಅನುಬಂಧದಲ್ಲಿ ತಿಳಿಸಿರುವ ಪರಿಮಿತ ರಜೆಯನ್ನು ಪೂರ್ವಾನುಮತಿ ಪಡೆದು ಉಪಯೋಗಿಸಿಕೊಳ್ಳಬಹುದು. ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಲು ಅಧಿಕಾರವುಳ್ಳ ಅಧಿಕಾರಿಗಳು ಪ್ರಸ್ತುತ ಅನುಮತಿಗೆ ಮಂಜೂರಾತಿ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ–*I* ರ ಅನುಬಂಧ

**ಸಂಖ್ಯೆ: ಸಿಆಸುಇ 23 ಹೆಚ್‌ಹೆಚ್‌ಎಲ್ 2012, ಬೆಂಗಳೂರು, ದಿನಾಂಕ: 19–11–2012**

2013ನೇ ವರ್ಷಕ್ಕೆ ರಾಜ್ಯ ಸರ್ಕಾರಿ ನೌಕರರಿಗೆ ಇರುವ ಪರಿಮಿತ ರಜಾ ದಿನಗಳ ಪಟ್ಟಿ.

| ಕ್ರ. ಸಂ. | ದಿನಾಂಕ | ವಾರಗಳು | ಪರಿಮಿತ ರಜಾ ದಿನಗಳು |
|---|---|---|---|
| 1. | 01–01–2013 | ಮಂಗಳವಾರ | ನೂತನ ವರ್ಷಾರಂಭ |
| 2. | 19–02–2013 | ಮಂಗಳವಾರ | ಶ್ರೀ ಮಧ್ವನವಮಿ |
| 3. | 26–03–2013 | ಮಂಗಳವಾರ | ಹೋಳಿ ಹಬ್ಬ |
| 4. | 30–03–2013 | ಶನಿವಾರ | ಹೋಲಿಸ್ಯಾಟರ್‌ಡೇ |
| 5. | 15–04–2013 | ಸೋಮವಾರ | ದೇವರ ದಾಸಿಮಯ್ಯ ಜಯಂತಿ |
| 6. | 19–04–2013 | ಶುಕ್ರವಾರ | ಶ್ರೀ ರಾಮ ನವಮಿ |
| 7. | 14–05–2013 | ಮಂಗಳವಾರ | ಶ್ರೀ ರಾಮಾನುಜಾಚಾರ್ಯ ಜಯಂತಿ |
| 8. | 15–05–2013 | ಬುಧವಾರ | ಶ್ರೀ ಶಂಕರಾಚಾರ್ಯ ಜಯಂತಿ |
| 9. | 25–05–2013 | ಶನಿವಾರ | ಬುದ್ಧ ಪೂರ್ಣಿಮ |
| 10. | 25–06–2013 | ಮಂಗಳವಾರ | ಷಬ್– ಎ– ಬರಾತ್ |
| 11. | 02–08–2013 | ಶುಕ್ರವಾರ | ಜಮತ್–ಉಲ್–ವಿದಾ |
| 12. | 05–08–2013 | ಸೋಮವಾರ | ಷಬ್–ಎ–ಖಾದರ್ |
| 13. | 16–08–2013 | ಶುಕ್ರವಾರ | ಶ್ರೀ ವರಮಹಾಲಕ್ಷ್ಮಿ ವ್ರತ |
| 14. | 20–08–2013 | ಮಂಗಳವಾರ | ಬ್ರಹ್ಮಶ್ರೀ ನಾರಾಯಣ ಗುರುಜೀ ಜಯಂತಿ, ಋಗ್–ಉಪಾಕರ್ಮ, ಯಜುರ್‌ಉಪಾಕರ್ಮ, ರಕ್ಷಾಬಂಧನ |
| 15. | 28–08–2013 | ಬುಧವಾರ | ಶ್ರೀ ಕೃಷ್ಣ ಜನ್ಮಾಷ್ಟಮಿ |
| 16. | 16–09–2013 | ಸೋಮವಾರ | ತಿರುಓಣಂ |
| 17. | 17–09–2013 | ಮಂಗಳವಾರ | ವಿಶ್ವಕರ್ಮ ಜಯಂತಿ |
| 18. | 18–09–2013 | ಬುಧವಾರ | ಅನಂತ ಪದ್ಮನಾಭ ವ್ರತ |
| 19. | 17–10–2013 | ಗುರುವಾರ | ತುಲಾ ಸಂಕ್ರಮಣ |
| 20. | 16–12–2013 | ಸೋಮವಾರ | ಹುತ್ತರಿ ಹಬ್ಬ |
| 21. | 24–12–2013 | ಮಂಗಳವಾರ | ಕ್ರಿಸ್‌ಮಸ್ ಈವ್ |

**ಸೂಚನೆ:–**

ಈ ರಜಾ ಪಟ್ಟಿಯು ಭಾನುವಾರದ ರಜಾ ದಿನಗಳಂದು ಬರುವ, ಸೌರಮಾನ ಯುಗಾದಿ (14–04–2013), ಸ್ವರ್ಣಗೌರಿ ವ್ರತ (08–09–2013) ಮತ್ತು ಗುರುನಾನಕ್ ಜಯಂತಿ (17–11–2013) ಒಳಗೊಂಡಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ – *II*

### ಸಂಖ್ಯೆ: ಸಿಆಸುಇ 23 ಹೆಚ್‌ಹೆಚ್‌ಎಲ್ 2012, ಬೆಂಗಳೂರು, ದಿನಾಂಕ: 19–11–2012

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20:25:26:ಪಿಯುಬಿ 1, ದಿನಾಂಕ: 15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್ಸ್ಟ್ರುಮೆಂಟ್ಸ್ ಆಕ್ಟ್ 1881ರ(1881ರ ಅಧಿನಿಯಮ ಸಂಖ್ಯೆ: 26) 25ನೇ ಸೆಕ್ಷನ್ ನಲ್ಲಿರುವ ವಿವರಣೆಯಂತೆ 2013ನೇ ವರ್ಷದಲ್ಲಿ ಈ ಕೆಳಗಿನ ದಿನಗಳನ್ನು ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಗಳೆಂದು ಘೋಷಿಸಲಾಗಿದೆ.

**ಎಲ್ಲಾ ಭಾನುವಾರಗಳು ಹಾಗೂ ಈ ಕೆಳಕಂಡ ದಿನಗಳು.**

| ಕ್ರ. ಸಂ. | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 1 | 14–01–2013 | ಸೋಮವಾರ | ಉತ್ತರಾಯಣ ಪುಣ್ಯ ಕಾಲ ಸಂಕ್ರಾಂತಿ ಹಬ್ಬ. |
| 2 | 25–01–2013 | ಶುಕ್ರವಾರ | ಈದ್ ಮಿಲಾದ್ |
| 3 | 26–01–2013 | ಶನಿವಾರ | ಗಣ ರಾಜ್ಯೋತ್ಸವ |
| 4 | 29–03–2013 | ಶುಕ್ರವಾರ | ಗುಡ್ ಫ್ರೈಡೆ |
| 5 | 01–04–2013 | ಸೋಮವಾರ | ಬ್ಯಾಂಕುಗಳ ವಾರ್ಷಿಕ ಲೆಕ್ಕ ಪತ್ರ ಮುಕ್ತಾಯ ದಿನ |
| 6 | 11–04–2013 | ಗುರುವಾರ | ಚಾಂದ್ರಮಾನ ಯುಗಾದಿ |
| 7 | 23–04–2013 | ಮಂಗಳವಾರ | *ಮಹಾವೀರ ಜಯಂತಿ* |
| 8 | 01–05–2013 | ಬುಧವಾರ | ಕಾರ್ಮಿಕ ದಿನಾಚರಣೆ |
| 9 | 13–05–2013 | ಸೋಮವಾರ | ಬಸವಜಯಂತಿ |
| 10 | 09–08–2013 | ಶುಕ್ರವಾರ | ಖುತುಬ್–ಎ–ರಂಜಾನ್ |
| 11 | 15–08–2013 | ಗುರುವಾರ | ಸ್ವಾತಂತ್ರ ದಿನಾಚರಣೆ |
| 12 | 09–09–2013 | ಸೋಮವಾರ | ವರಸಿದ್ಧಿ ವಿನಾಯಕ ವ್ರತ |
| 13 | 30–09–2013 | ಸೋಮವಾರ | ಬ್ಯಾಂಕುಗಳ ಅರ್ಧ ವಾರ್ಷಿಕ ಲೆಕ್ಕ ಪತ್ರ ಮುಕ್ತಾಯ ದಿನ |
| 14 | 02–10–2013 | ಬುಧವಾರ | ಮಹಾತ್ಮಾಗಾಂಧೀ ಜಯಂತಿ |
| 15 | 04–10–2013 | ಶುಕ್ರವಾರ | ಮಹಾಲಯ ಅಮವಾಸ್ಯೆ |
| 16 | 14–10–2013 | ಸೋಮವಾರ | ವಿಜಯ ದಶಮಿ |
| 17 | 16–10–2013 | ಬುಧವಾರ | ಬಕ್ರೀದ್ |
| 18 | 18–10–2013 | ಶುಕ್ರವಾರ | ಮಹರ್ಷಿ ವಾಲ್ಮೀಕಿ ಜಯಂತಿ |
| 19 | 01–11–2013 | ಶುಕ್ರವಾರ | ಕನ್ನಡ ರಾಜ್ಯೋತ್ಸವ |
| 20 | 02–11–2013 | ಶನಿವಾರ | ನರಕ ಚತುರ್ದಶಿ |

| ಕ್ರ. ಸಂ. | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 21 | 04–11–2013 | ಸೋಮವಾರ | ಬಲಿಪಾಡ್ಯಮಿ, ದೀಪಾವಳಿ |
| 22 | 14–11–2013 | ಗುರುವಾರ | ಮೊಹರಂ ಕಡೇ ದಿನ |
| 23 | 20–11–2013 | ಬುಧವಾರ | ಕನಕದಾಸ ಜಯಂತಿ |
| 24 | 25–12–2013 | ಬುಧವಾರ | ಕ್ರಿಸ್‌ಮಸ್ |

**ಸೂಚನೆ:–**

1. ಈ ರಜಾ ಪಟ್ಟಿಯು ಭಾನುವಾರಗಳಂದು ಬರುವ 10–03–2013 ಮಹಾ ಶಿವರಾತ್ರಿ, 14–04–2013 ಡಾ॥ ಬಿ.ಆರ್. ಅಂಬೇಡ್ಕರ್ ಜಯಂತಿ, 13–10–2013 ಮಹಾನವಮಿ ಆಯುಧಪೂಜೆ, ರಜಾ ದಿನಗಳನ್ನೊಳಗೊಂಡಿರುವುದಿಲ್ಲ.

2. ದಿನಾಂಕ: 01–04–2013 ಹಾಗೂ 30–09–2013 ವಾಣಿಜ್ಯ ಬ್ಯಾಂಕುಗಳಿಗೆ ಹಾಗೂ ಸಹಕಾರಿ ಬ್ಯಾಂಕುಗಳ, ವಾರ್ಷಿಕ ಹಾಗೂ ಅರ್ಧವಾರ್ಷಿಕ ಲೆಕ್ಕ ಪತ್ರ ಮುಕ್ತಾಯದ ದಿನಗಳು ಆಗಿರುವುದರಿಂದ ಸದರಿ ದಿನಗಳಂದು ವಾಣಿಜ್ಯ ಹಾಗೂ ಸಹಕಾರಿ ಬ್ಯಾಂಕುಗಳಿಗೆ ಮಾತ್ರ ರಜಾ ಇರುತ್ತದೆ. ಈ ದಿನಗಳಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಕಛೇರಿ ಕಾರ್ಯ ನಿರ್ವಹಿಸುತ್ತದೆ. ಬ್ಯಾಂಕ್ ಆಫ್ ಇಂಡಿಯಾಗೆ (ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಎಲ್ಲಾ ಕಛೇರಿಗಳಿಗೆ) ಜುಲೈ 01 ರಂದು ವಾರ್ಷಿಕ ಲೆಕ್ಕ ಪತ್ರದ ಮುಕ್ತಾಯದ ದಿನವಾಗಿರುವುದರಿಂದ ಸಾರ್ವಜನಿಕ ವ್ಯವಹಾರವಿರುವುದಿಲ್ಲ. ದಿನಾಂಕ : 31–12–2013 ರಂದು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಕಾರ್ಯ ನಿರ್ವಹಿಸುತ್ತದೆ.

3. ದಿನಾಂಕ 17–10–2013 (ಗುರುವಾರ) ತುಲಾ ಸಂಕ್ರಮಣ ಹಾಗೂ ದಿನಾಂಕ: 16–12–2013 (ಸೋಮವಾರ) ಹುತ್ತರಿ ಹಬ್ಬದ ಪ್ರಯುಕ್ತ ಕೊಡಗು ಜಿಲ್ಲೆಗೆ ಮಾತ್ರ ಅನ್ವಯಿಸುವಂತೆ ಸ್ಥಳೀಯ ರಜೆಯೆಂದು ಘೋಷಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## *PERSONNEL & ADMINISTRATIVE REFORMS SECRETARIAT*

### *NOTIFICATION – I*

### *No. DPAR 23 HHL 2012 Bangalore, Dated: 19-11-2012*

The following list of General Holidays sanctioned by the Government for the year 2013 is published for general information.

All Second Saturdays, Sundays and the following days.

| *SL. No.* | *DATE* | *DAYS* | *PUBLIC HOLIDAYS* |
|---|---|---|---|
| 1. | 14-01-2013 | Monday | Uttarayana punya kala Sankranti Festival |
| 2. | 25-01-2013 | Friday | Id-Milad |
| 3. | 26-01-2013 | Saturday | Republic Day |
| 4. | 29-03-2013 | Friday | Good Friday |
| 5. | 11-04-2013 | Thursday | Chandramana Ugadi. |
| 6. | 23-04-2013 | Tuesday | Mahaveer Jayanthi |
| 7. | 01-05-2013 | Wednesday | May Day |

| SL. No. | DATE | DAYS | PUBLIC HOLIDAYS |
|---|---|---|---|
| 8. | 13-05-2013 | Monday | Basava Jayanthi. |
| 9. | 09-08-2013 | Friday | Kutub-E-Ramzan |
| 10. | 15-08-2013 | Thursday | Independence day |
| 11. | 09-09-2013 | Monday | Varasiddhi Vinayaka Vrata |
| 12. | 02-10-2013 | Wednesday | Mahathma Gandhi Jayanthi |
| 13. | 04-10-2013 | Friday | Mahalaya Amavasye |
| 14. | 14-10-2013 | Monday | Vijayadasami |
| 15. | 16-10-2013 | Wednesday | Bakrid |
| 16. | 18-10-2013 | Friday | Maharshi Valmiki Jayanthi |
| 17. | 01-11-2013 | Friday | Kannada Rajyotsava |
| 18. | 02-11-2013 | Saturday | Naraka Chaturdashi. |
| 19. | 04-11-2013 | Monday | Balipadyami Deepavali |
| 20. | 14-11-2013 | Thursday | Last Day of Moharam |
| 21. | 20-11-2013 | Wednesday | Kanakadasa Jayanthi. |
| 22. | 25-12-2013 | Wednesday | Christmas |

***Note :***

1. This list does not include Maha Shivaratri (10-03-2013), Dr. B.R. Ambedkar Jayanthi (14.04.2013), Maha Navami Ayudapooja (13-10-2013), which fall on Sundays.
2. Government offices will be closed through out the State on General Holidays. However Heads of Department should make necessary arrangements for the discharge of urgent work.
3. If any of the Muslim Holidays notified above does not fall on the date notified, Muslims in Government Service may be granted Holiday on the date of observance in lieu of the holidays already notified.
4. Local holiday is declared for Kodagu District only on account of Tulasankramana on 17-10-2013 (Thursday) and Huthri Festival on 16-12-2013 (Monday)
5. Separate list of Holidays will be published by the Commissioner of Public Instructions, Bangalore for the Education Department.
6. In addition to the General holidays the State Government employees may utilize any of the Restricted Holidays not exceeding two days during the year 2013 with previous permission from the authority who is authorised to sanction casual leave.

By Order and in the Name of Governor of Karnataka,

***PADMARAJU***
Under Secretary to Government
Dept. of Personnel & Administrative Reforms
(State Protocol - 1)

## *PERSONNEL & ADMINISTRATIVE REFORMS SECRETARIAT*

### *ANNEXURE TO NOTIFICATION – I*

### *No. DPAR 23 HHL 2012 Bangalore, Dated: 19-11-2012*

List of Restricted Holidays for the State Government Employees for the year 2013.

| ***Sl. No.*** | ***Date*** | ***Days*** | ***Restricted Holidays*** |
|---|---|---|---|
| 1. | 01-01-2013 | Tuesday | New Year |
| 2. | 19-02-2013 | Tuesday | Shri Madvanavami |
| 3. | 26-03-2013 | Tuesday | Holi Festival |
| 4. | 30-03-2013 | Saturday | Holy Saturday |
| 5. | 15-04-2013 | Monday | Devara Dasimayya Jayanthi |
| 6. | 19-04-2013 | Friday | Sriramanavami |
| 7. | 14-05-2013 | Tuesday | Shri Ramanujacharya Jayanthi |
| 8. | 15-05-2013 | Wednesday | Shri Shankaracharya Jayanthi |
| 9. | 25-05-2013 | Saturday | Buddha Poornima |
| 10. | 25-06-2013 | Tuesday | Shab-e-barat |
| 11. | 02-08-2013 | Friday | Jamat-Ul-Vida |
| 12. | 05-08-2013 | Monday | Shab-e-Khader |
| 13. | 16-08-2013 | Friday | Shri Varamahalakshmi Vrata |
| 14. | 20-08-2013 | Tuesday | Brahmashri Narayana Guruji Jayanthi,<br>Rug- Upakarma, Yajur Upakarma, Raksha Bandhan |
| 15. | 28-08-2013 | Wednesday | Shri Krishnajamashtami |
| 16. | 16-09-2013 | Monday | Thiru Onam |
| 17. | 17-09-2013 | Tuesday | Vishwakarma Jayanthi |
| 18. | 18-09-2013 | Wednesday | Ananta Padmanabha Vrata |
| 19. | 17-10-2013 | Thursday | Tula Sankramana |
| 20. | 16-12-2013 | Monday | Huttari Festival |
| 21. | 24-12-2013 | Tuesday | Christmas Eve |

Note:

This list does not include, ¸Souramana Ugadi (14-04-2013), Swarna Gowri Vratha (08-09-2013) and Guru Nanak Jayanthi (17-11-2013), which fall on Sundays.

By Order and in the Name of the Governor of Karnataka,

***PADMARAJU***
Under Secretary to Government
Dept. of Personnel & Administrative Reforms
(State Protocol - 1)

## *PERSONNEL & ADMINISTRATIVE REFORMS SECRETARIAT*

### *NOTIFICATION – II*

### *No. DPAR 23 HHL 2012 Bangalore, Dated: 19-11-2012*

Under the explanation of Section 25 of the Negotiable Instruments Act 1881 (Act No. XXVI of 1881) read with Notification No. 20/25/26/Pub-1 dt. 15.6.1957 of the Government of India, Ministry of Home Affairs the following shall be Public Holidays throughout the State of Karnataka during the year 2013.

All Sundays and the following days.

| *SL. No.* | *DATE* | *DAYS* | *PUBLIC HOLIDAYS* |
|---|---|---|---|
| 1. | 14-01-2013 | Monday | Uttarayana punya kala Sankranti Festival |
| 2. | 25-01-2013 | Friday | Id-Milad |
| 3. | 26-01-2013 | Saturday | Republic Day |
| 4. | 29-03-2013 | Friday | Good Friday |
| 5. | 01-04-2013 | Monday | Yearly closing of Bank Accounts |
| 6. | 11-04-2013 | Thursday | Chandramana Ugadi. |
| 7. | 23-04-2013 | Tuesday | Mahaveer Jayanthi |
| 8. | 01-05-2013 | Wednesday | May Day |
| 9. | 13-05-2013 | Monday | Basava Jayanthi. |
| 10. | 09-08-2013 | Friday | Kutub-E-Ramzan |
| 11. | 15-08-2013 | Thursday | Independence day. |
| 12. | 09-09-2013 | Monday | Varasiddhi Vinayaka Vrata |
| 13. | 30-09-2013 | Monday | Half- Yearly Closing of Bank Accounts |
| 14. | 02-10-2013 | Wednesday | Mahathma Gandhi Jayanthi |
| 15. | 04-10-2013 | Friday | Mahalaya Amavasye |
| 16. | 14-10-2013 | Monday | Vijayadasami. |
| 17. | 16-10-2013 | Wednesday | Bakrid. |
| 18. | 18-10-2013 | Friday | Maharshi Valmiki Jayanthi |
| 19. | 01-11-2013 | Friday | Kannada Rajyotsava |
| 20. | 02-11-2013 | Saturday | Naraka Chaturdashi. |
| 21. | 04-11-2013 | Monday | Balipadyami Deepavali. |
| 22. | 14-11-2013 | Thursday | Last Day of Moharam |
| 23. | 20-11-2013 | Wednesday | Kanakadasa Jayanthi. |
| 24. | 25-12-2013 | Wednesday | Christmas |

***Note***

1. This list does not include Maha Shivaratri (10-03-2013), Dr. B.R. Ambedkar Jayanthi (14-04-2013), Maha Navami Ayudapooja(13-10-2013), which fall on Sundays.

2. The holidays are declared on 01-04-2013 & 30-09-2013 for closing of Accounts of Commercial Banks and Co-operative Banks only. The Reserve Bank of India will be functioning on these days. However, all the offices of Reserve Bank will remain closed for public transactions on July 01 for annual closing of accounts & December 31 will be a working day for Reserve Bank of India.

3. Local holiday is declared for Kodagu District only on account of Tulasankramana on 17-10-2013 (Thursday) and Huthri Festival on 16-12-2013 (Monday)

By Order and in the Name of Governor of Karnataka,

***PADMARAJU***
Under Secretary to Government
Dept. of Personnel & Administrative Reforms
(State Protocol - 1)

# ವಿಶೇಷ ಪತ್ರಿಕೆ

ಭಾಗ – ***IV-A*** ‖ ಬೆಂಗಳೂರು, ಬುಧವಾರ, ನವೆಂಬರ್ ೨೧, ೨೦೧೨ (ಕಾರ್ತೀಕ ೩೦, ಶಕ ವರ್ಷ ೧೯೩೪) ‖ ನಂ. ೮೩೫

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 88 ಸೇನಿಡಿ 2012, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2012**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಅಧಿಸೂಚನೆ ಸಂಖ್ಯೆ: ಸಿಆಸುಇ 88 ಸೇನಿಡಿ 2012, ದಿನಾಂಕ 15ನೇ ಸೆಪ್ಟೆಂಬರ್ 2012ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) (ಎರಡನೇ ತಿದ್ದುಪಡಿ) ನಿಯಮಗಳು, 2012ರ ಕರಡನ್ನು ಕರ್ನಾಟಕ ರಾಜ್ಯಪತ್ರ ವಿಶೇಷ ಪತ್ರಿಕೆಯ ಭಾಗ IV-A ರಲ್ಲಿ (ವಿಶೇಷ ಸಂಚಿಕೆ) ದಿನಾಂಕ ಸೆಪ್ಟೆಂಬರ್ 15, 2012 ಪ್ರಕಟಿಸಿ, ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಬಾಧಿತರಾಗಬಹುದಾದ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿರುವುದರಿಂದ;

ಮತ್ತು ಸದರಿ ರಾಜ್ಯ ಪತ್ರವನ್ನು 2012ರ ಸೆಪ್ಟೆಂಬರ್ 15ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ನಿಗದಿತ ಅವಧಿಯಲ್ಲಿ ಯಾವುದೇ ಸಲಹೆ ಅಥವಾ ಆಕ್ಷೇಪಣೆಗಳು ಸ್ವೀಕರಿಸಿಲ್ಲದಿರುವುದರಿಂದ;

ಈಗ, ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಡನೆ ಓದಿಕೊಂಡಂತೆ ಇದರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಈ ಮೂಲಕ ಈ ಕೆಳಗಿನಂತೆ ನಿಯಮಗಳನ್ನು ರಚಿಸುತ್ತದೆ, ಎಂದರೆ:–

### ನಿಯಮಗಳು

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗಳು (ನೇಮಕಾತಿ) (ಎರಡನೇ ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1992ರ ಅನುಸೂಚಿಯಲ್ಲಿ "III. ಯೋಜನೆ, ಸಾಂಸ್ಥಿಕ ಹಣಕಾಸು ಮತ್ತು ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಯೋಜನಾ ವಿಭಾಗದ ಕಾರ್ಯನಿರ್ವಹಣಾ ಶಾಖೆಗಳು" ಶೀರ್ಷಿಕೆಯಡಿಯಲ್ಲಿ, ಕ್ರಮ ಸಂಖ್ಯೆ: 1ರಲ್ಲಿಯ 'ಹಿರಿಯ ನಿರ್ದೇಶಕ' ಎಂಬ ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (4)ನೇ ಅಂಕಣದಲ್ಲಿನ ನಮೂದುಗಳ ತರುವಾಯ ಈ ಮುಂದಿನದನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು ಆರು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳು ಬಡ್ತಿಗೆ ಲಭ್ಯವಿಲ್ಲದಿದ್ದಲ್ಲಿ, ನಾಲ್ಕು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳನ್ನು ಬಡ್ತಿಗೆ ಪರಿಗಣಿಸಬಹುದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–2)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 88 SRD 2012, Bangalore, Dated: 20th November 2012

Whereas, the draft of the Karnataka Government Secretariat Services (Recruitment) (Second Amendment) Rules, 2012, was published as required by clause (a) of sub-section (2) of section 3 of the Karnataka State Civil Services Act, 1978 (Karnataka Act 14 of 1990) in Notification No. DPAR 88 SRD 2012, dated 15th September 2012 in Part IV-A of the Karnataka Gazette (Extra ordinary) dated 15th September, 2012 inviting objections and suggestions from all persons likely to be affected thereby within fifteen days from the date of publication in the official Gazette.

And whereas, the said Gazette was made available to public on 15th September, 2012.

And whereas, no objections and suggestions have been received by the State Government.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules namely:-

### RULES

***1. Title and Commencement.-*** (1) These rules may be called the Karnataka Government Secretariat Services (Recruitment) (Second Amendment) Rules, 2012.

(2) They shall come into force from the date of their publication in the official Gazette.

***2. Amendment of Schedule.-*** In the Karnataka Government Secretariat Services (Recruitment) Rules, 1992, in Schedule under the heading "III. FUNCTIONAL DIVISIONS OF PLANNING WING OF PLANNING, INSTITUTIONAL FINANCE AND STATISTICS AND SCIENCE AND TECHNOLOGY DEPARTMENT", in the entries relating to the category of post of "Senior Director", at Serial No.1, after the entries in column (4), the following shall be inserted at the end, namely:-

"Provided that if persons who have put in a service of not less than six years are not available, persons who have put in a service of not less than four years may be considered for promotion.".

BY ORDER AND IN THE NAME OF THE GOVERNOR OF KARNATAKA,

***D. NAGESH PHATAK***
Under Secretary to Government,
Department of Personnel and Administrative Reforms
(Service – Rules - 2)

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಬುಧವಾರ, ನವೆಂಬರ್ ೨೧, ೨೦೧೨ (ಕಾರ್ತೀಕ ೩೦, ಶಕ ವರ್ಷ ೧೯೩೪) | ನಂ. ೮೩೬ |
|---|---|---|

### ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಇ 240 ಎಂಆರ್ಇ 2012, ಬೆಂಗಳೂರು, ದಿನಾಂಕ : 21ನೇ ನವೆಂಬರ್, 2012

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 10(1)** ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ:ಸಇ 156 ಎಂಆರ್ಇ(4) 2012 ದಿನಾಂಕ: 30/07/2012 ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಸಇ 156 ಎಂಆರ್ಇ 2012(ಭಾಗ) ದಿನಾಂಕ:25/08/2012 ರಲ್ಲಿ ಉಲ್ಲೇಖಿಸಿರುವ ಅಧಿಸೂಚನೆ ಸಂಖ್ಯೆ: ಸಇ 77 ಎಂಆರ್ಇ 2011 ದಿನಾಂಕ: 05/03/2011 ಹಾಗೂ ದಿನಾಂಕ: 10/06/2011 ಮತ್ತು ಅಧಿಸೂಚನೆ ಸಂಖ್ಯೆ: ಸಇ 346 ಎಂಆರ್ಇ 2010 ದಿನಾಂಕ: 24/01/2011 ರಲ್ಲಿ ಕಾರಟಗಿ ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನ ಮಾಡಲಾಗಿದ್ದ ಈ ಕೆಳಕಂಡ ಸದಸ್ಯರುಗಳ ನಾಮನಿರ್ದೇಶನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ:

| ಕ್ರ.ಸಂ. | ಶ್ರೀಯುತರು / ಶ್ರೀಮತಿ | |
|---|---|---|
| 1 | ಬಸಪ್ಪ ತಂದೆ ಗುಂಡಪ್ಪ ಅರಳಿ,<br>ಅರಳಿ ಸ್ಟ್ರೀಟ್, **ಕಾರಟಗಿ.** | ಸದಸ್ಯರು |
| 2 | ಬಾವಿ ಶರಣಪ್ಪ ತಂದೆ ಬಸನಗೌಡ,<br>ಕೊಟ್ನೇಕಲ್ ರಸ್ತೆ, **ಸಿದ್ದಾಪುರ.** | ಸದಸ್ಯರು |
| 3 | ಶಾಲಿಗನೂರ್ ಹನುಮಂತಪ್ಪ ತಂದೆ ಮುಕ್ಕಣ್ಣ,<br>**ಸಾ॥ ಶಾಲಿಗನೂರ್.** | ಸದಸ್ಯರು |
| 4 | ಜಿ. ರಾಮಮೋಹನ್ ತಂದೆ ಜಿ. ರಾಮರಾವ್,<br>ಸಾ॥ ಪಟೇಲ್ ಕ್ಯಾಂಪ್, **ಚೆಳ್ಳೂರು.** | ಸದಸ್ಯರು |
| 5 | ಬೂದಿರಡ್ಡೆಪ್ಪ ತಂದೆ ಮಾಣಿಕ್ಯಪ್ಪ ನಾಯಕ್,<br>3ನೇ ವಾರ್ಡ್, **ಕಾರಟಗಿ.** | ಸದಸ್ಯರು |
| 6 | ಮಾರೇಶ್ ತಂದೆ ಹನುಮಂತಪ್ಪ, **ಸಾ॥ ಮುಸ್ಟೂರು.** | ಸದಸ್ಯರು |
| 7 | ಹೇಮ ದೇಶಪಾಂಡೆ ಕೋಂ. ವೆಂಕಟೇಶ ದೇಶಪಾಂಡೆ,<br>**ಸಾ॥ ಕಾರಟಗಿ.** | ಸದಸ್ಯರು |
| 8 | ಬಜಾರ್ ಮುರುಡ ಬಸಪ್ಪ ಕೋಲಕಾರ,<br>**ಸಾ॥ ಯರಡೋಣ.** | ಸದಸ್ಯರು |
| 9 | ಚಿಟ್ಟೂರಿ ದುರ್ಗಾರಾವ್ ತಂದೆ ಲಚ್ಚಯ್ಯ,<br>**ಸಾ॥ ಬರಗೂರ್ ಕ್ಯಾಂಪ್.** | ಸದಸ್ಯರು |
| 10 | ಸಿದ್ಧನಗೌಡ ತಂದೆ ಲಿಂಗನಗೌಡ,<br>ಮಾಲಿ ಪಾಟಿಲ್, **ಸಾ॥ ಬೂದಗುಂಪಾ.** | ಸದಸ್ಯರು |
| 11 | ಮುಕ್ತಾಂಸಾಬ್ ತಂದೆ ಖಾದರ್ ಸಾಬ್,<br>ಕಟಂಬ್ಲಿ, **ಸಾ॥ ಸಿದ್ಧಾಪುರ.** | ಸದಸ್ಯರು |
| 12 | ವೆಂಕೋಬಣ್ಣ ಶ್ರೇಷ್ಠಿ ತಂದೆ ವೀರಯ್ಯ ಶ್ರೇಷ್ಠಿ,<br>**ಸಾ॥ ಕಾರಟಗಿ.** | ಸದಸ್ಯರು |

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 10(1)** ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರಟಗಿಗೆ** ಸದಸ್ಯರನ್ನಾಗಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ದಿನಾಂಕ: 30/08/2013 ರವರೆಗೆ ಅಥವಾ ಸರ್ಕಾರದ ಇಚ್ಛಾನುಸಾರದವರೆಗೆ ನಾಮನಿರ್ದೇಶನ ಮಾಡಲಾಗಿದೆ;–

| ಕ್ರ.<br>ಸಂ. | ಶ್ರೀಯುತರು / ಶ್ರೀಮತಿ<br>ಮತ್ತು ವಿಳಾಸ | |
|---|---|---|
| 1 | ಬಸವರಾಜ ಬಿನ್ ಶ್ರೀ ವೀರಭದ್ರಪ್ಪ ಚಳ್ಳೂರ,<br>**ಸಾ॥ ಬೂದಗುಂಪ.** | ಸದಸ್ಯರು |
| 2 | ವಿರುಪಣ್ಣ ಬಿನ್ ಶ್ರೀ ಭೋಗಪ್ಪ ಕಲ್ಲೂರ,<br>**ಸಾ॥ ನವಲಿ.** | ಸದಸ್ಯರು |
| 3 | ಶಿವಶರಣೇಗೌಡ ಬಿನ್ ಶ್ರೀ ಸೋಮ ಶೇಖರಗೌಡ<br>**ಸಾ॥ ಯರಡೋಣ, ವರ್ತಕರ ಪ್ರತಿನಿಧಿ.** | ಸದಸ್ಯರು |
| 4 | ಹೊನ್ನೂರಪ್ಪ ತಂದೆ ದೊಡ್ಡಪ್ಪ ನಾಯಕ್,<br>**ಸಾ॥ ಉಳೇನೂರ.** | ಸದಸ್ಯರು |
| 5 | ಶ್ರೀನಿವಾಸ ಬಿನ್ ಶ್ರೀ ವೀರರಾಜು ಬೋಳ<br>ಸಾ॥ ಕಿಂದಿಕ್ಯಾಂಪ್, **ಯರಡೋಣ.** | ಸದಸ್ಯರು |
| 6 | ಶ್ರೀಧರ್ ಬಿನ್ ಶ್ರೀ ವೀರಣ್ಣ ಗೋನಾಳ,<br>**ಸಾ॥ ಬೂದುಗುಂಪ.** | ಸದಸ್ಯರು |
| 7 | ಶ್ರೀ ಚಂದ್ರಶೇಖರ್ ಗೌಡ ಬಿನ್ ವಿಶ್ವನಾಥ ಗೌಡ<br>ಪೋಲೀಸ್ ಪಾಟೀಲ್, **ಸಿದ್ದಾಪುರ.** | ಸದಸ್ಯರು |

| | | |
|---|---|---|
| 8 | ಪದ್ಮಾವತಿ ಕೋಂ ವೆಂಕಟೇಶ್ವರ ರಾವ್,<br>**ಸಾ॥ ಬಸವಣ್ಣ ಕ್ಯಾಂಪ್.** | ಸದಸ್ಯರು |
| 9 | ವೀರೇಶಪ್ಪ ಬಿನ್ ಸಣ್ಣ ವೀರನಗೌಡ ನಡವಿ,<br>**ಸಾ॥ ಪನ್ನಾಪುರ.** | ಸದಸ್ಯರು |
| 10 | ವೈ ಮುರಳಿಕೃಷ್ಣ ಬಿನ್ ರಾಘವೇಂದ್ರರಾವ್,<br>**ಸಾ॥ ಗುಂಡೂರು, ಲಕ್ಷ್ಮೀ ಕ್ಯಾಂಪ್.** | ಸದಸ್ಯರು |
| 11 | ಚಲುವಾದಿ ದೇವೀಂದ್ರಪ್ಪ ಬಿನ್ ಬಾಲಪ್ಪ,<br>**ಸಾ॥ ಈಳಿಗನೂರ.** | ಸದಸ್ಯರು |

ಪ್ರಸ್ತುತ **ಕಾರಟಗಿ ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ** ಸದಸ್ಯರಾಗಿರುವ ಈ ಕೆಳಕಂಡ ಸದಸ್ಯರ ನಾಮನಿರ್ದೇಶನವು ದಿನಾಂಕ: 30/08/2013 ರವರೆಗೆ ಮುಂದುವರೆದಿದೆ;–

| *ಕ್ರ. ಸಂ.* | ಶ್ರೀಯುತರು / ಶ್ರೀಮತಿ<br>ಮತ್ತು ವಿಳಾಸ | |
|---|---|---|
| 1 | ಎನ್. ಬಸನಗೌಡ ತಂದೆ ಮಲ್ಲಿಕಾರ್ಜುನ ಗೌಡ ಪೋಲೀಸ್ ಪಾಟೀಲ್,<br>**ಸಾ॥ ಅದಾಪುರ ಅಂಚೆ: ನವಲಿ (ಸಹಕಾರ ಮಾರುಕಟ್ಟೆ ವ್ಯವಹಾರಗಳ ಪ್ರತಿನಿಧಿ)** | ಸದಸ್ಯರು |
| 2 | ವಿರುಪಾಕ್ಷ ಗೌಡ ತಂದೆ ಅಯ್ಯನಗೌಡ ಪೋಲೀಸ್ ಪಾಟೀಲ್,<br>**ಸಾ॥ ಮೈಲಾಪುರ (ಸಂಸ್ಕರಣ ಘಟಕ ಪ್ರತಿನಿಧಿ)** | ಸದಸ್ಯರು |

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 10(2)** ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, "**ಶ್ರೀ ಬಸವರಾಜ ಬಿನ್ ವೀರಭದ್ರಪ್ಪ ಚಳ್ಳೂರ, ಸಾ॥ ಬೂದಗುಂಪಾ**" ಇವರನ್ನು **ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರಟಗಿಯ ಅಧ್ಯಕ್ಷರನ್ನಾಗಿ** ಮತ್ತು ಶ್ರೀ **ವಿರುಪಣ್ಣ ಬಿನ್ ಭೋಗಪ್ಪ ಕಲ್ಲೂರ, ಸಾ॥ ನವಲಿ** ಇವರನ್ನು **ಉಪಾಧ್ಯಕ್ಷರನ್ನಾಗಿ** ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ – 1 (ಪ್ರಭಾರ)
ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – *IV-A* | ಬೆಂಗಳೂರು, ಗುರುವಾರ, ನವೆಂಬರ್ ೨೨, ೨೦೧೨ (ಮಾರ್ಗಶಿರ ೧, ಶಕ ವರ್ಷ ೧೯೩೪) | ನಂ. ೮೩೯ |
|---|---|---|

## *TRANSPORT SECRETARIAT*

### *NOTIFICATION*

### *No. SARIE 187 SAEEPA 2012, Bangalore, Dated:21-11-2012*

Whereas, the State Government considered that conditions have changed since the publication of the notification No. SARIE 188 SAEPA 2008 dated 03-11-2010 in respect of the maximum rates of fares and freights fixed for Stage Carriages in the State.

And whereas, it is considered necessary to supersede the direction issued to the State Transport Authority and Regional Transport Authority in the said notification in respect of the maximum rates of fares and freights fixed for Stage Carriages in the state.

Now, therefore in exercise of the powers conferred by sub-section (1) (i) of section 67 of Motor Vehicles Act 1988 (Act No 59 of 1988) and in supersession of the Notification No. SARIE 188 SAEPA 2008 dated 03-11-2010, the Government of Karnataka here by issue the following directions to the Karnataka State Transport Authority and the Regional Transport Authority namely:-

The Karnataka State Transport Authority and the Regional Transport Authority is directed to fix with effect from the date of this notification, the following maximum rates of fares and freights for Stage Carriages in the State, namely:-

| ***Sl. No*** | ***Class of Vehicle*** | ***Fares*** |
|---|---|---|
| I | Stage Carriages plying in the Corporation limits of Bangalore, Mysore, Hubli-Darwad, Belgaum, Mangalore etc., and in the Municipal limits of any other city with a population of over one lakh. | (i) Six rupees fifty paise for the first stage of 2 Kms or part thereof, rupees four and paise fifty (Rs. 4.5) for the second stage of 2 Kms or part thereof and rupee one and paise fifty for the subsequent stages of 2 Kms or part thereof.<br>(ii) Rupee one and paise fifty extra than the fares indicated at (i) above for Express services.<br>(iii) one and half times the fares indicated at (i) above<br>(a) For services operated between 22.00 hrs and 06.00 hrs.<br>(b) For such services introduced to cater to the increased traffic on any particular day or days or during festivals, fairs, Jathras etc, and rounding off to the next higher multiple of a rupee .<br>(iv) Fixation of fares in respect of high end, specially tailored / branded services of non-A/C type and A/C type with low floor , EURO III / EURO IV, Automatic transmission, kneeling Mechanism etc. is left to the discretion of the concerned STU's /Operators . |
| II | Stage Carriages plying in the areas other than those indicated in item I above, but plying up to 25km from the corporation limits of Bangalore City, up to 15 kms from the Corporation limits of Hubli-Darwad, Belgaum, Mangalore, Mysore and any other city population of one lakh and above. | (i) Six rupees for the 1st stage of 2 Kms or part thereof, rupees four for the 2nd stage of 2 Kms or part thereof and rupee one and paise fifty for the subsequent stages of 2 Kms or part thereof.<br>(ii) Rupee one and paise fifty extra than the fares indicated at (i) above for Express services.<br>(iii) one and half times the fares indicated at (i) above.<br>(a) For services operated between 22.00 hrs and 06.00 hrs.<br>(b) To carter to the increased traffic on any particular day or days or during festivals, fairs, Jathras etc, and rounding off the fares to the next higher multiple of a rupee .<br>(iv) Fixation of fares in respect of high end, specially tailored / branded services of non-A/C type and A/C type with low floor, EURO III / EURO IV, Automatic transmission, kneeling Mechanism etc. is left to the discretion of the concerned STU's /Operators . |

| Sl. No | Class of Vehicle | Fares |
|---|---|---|
| III | Stage Carriages plying in the areas other than those referred at item I and II above.<br>(a) Ordinary Services | (a) Seventy five paise per Km or six rupees per stage of 6.5 Kms or part thereof rounding off to the next rupees subject to a minimum fare of rupees six.<br>(b) The fares for sub stages is to the fixed by the respective STU's/operators.<br>(c) No other fee to be levied. |
| | (b) Express Services | Eighty five paise per Km or six rupees per stage of 6.5 Kms or part thereof rounded off to the next rupee subject to a minimum fare of rupees seven. |
| | (c) Semi Luxury or Semi Deluxe Coaches | Ninty three paise per Km or six rupees per stage of 6.5 Kms or part thereof rounded off to the next rupee subject to a minimum fare of rupees Eleven. |
| | (d) Luxury or Super Deluxe Coaches | One rupee ten paise (Rs. 1.10) per Km or seven rupees per stage of 6.5 Kms or part thereof rounded off to the next rupee subject to a minimum fare of rupees seventeen. |
| | (e) High-tech Buses | One rupees and twenty five paise (Rs. 1.25) per Kms or seven rupees and paise fifty per stage of 6.5 Kms or part thereof rounded off to the next rupee subject to a minimum fare of rupees twenty. |
| | (f)For night services excluding item (e) which operate for not less than five hours between 19.00 hrs and 07.00 hrs | Extra ten paise per km or forty paise per stage of 6.5 Kms or part thereof rounded off to the next rupee. |
| | (g) To cater to the increased traffic on any particular day/ days or during fairs, Jathras, Weekends etc. | Not exceeding two times the fares indicated at item III above and rounded off to the next rupee. |
| | (h) Intercity A/C services with EURO-III/EURO-IV compliance. | Fixation of fares left to the discretion of the concerned STU's based on market demand. |

Note: Wherever the operators pay road user fee, entry fee, bridge fee, toll fee etc., the same may be recovered from the passengers on pro rata basis. Any other fee collected for any other purpose and not spent for the same will be set off during next fare revision along with interest earned thereon.

Explanation:-

(i) An Express Stage Carriage is a Stage Carriage plying on a route covering a distance of not less than 25 Kms with specified and limited halts and not stopping at every bus stop or Stage to pick up or set down passengers,

(ii) Semi-Luxury/semi-deluxe coaches are carriages fitted with foam cushions and head rest,

(iii) Luxury/super deluxe coaches are carriages fitted with foam cushions and head rest and reclining seats

(iv) Hi-tech buses/carriages are those providing comfortable sleeping while seating for the passenger.

IV). Luggage:- Where the weight of the luggage does not exceed 20Kgs., a luggage surcharge is payable by every passenger at 10 paise for every two stages or part thereof subject to a minimum of 50 paise and a maximum of Rs 3.50 together with the passenger fares and where the weight of the luggage exceeds 20 Kgs, the freight charges shall be as follows:-

Not exceeding 50 paise per unit of 15 Kgs weight per stage of 6.5 Kms or part thereof subject to a minimum of Rs 3.5 per percel.

V) Children: Between the age of 6 and 12 years may be charged at the adult rate of fares for journeys in luxury, super deluxe, Hi-tech and A/C services and at ½ the above rates for city/suburban and mofussil ordinary, express and semi-luxury coach services subject to a minimum of respective adult fares, rounding off the fare to the next higher multiple of 50 paise in case of suburban and mofussil ordinary services and to the next higher multiple of a rupee in case of remaining services.

VI) Surcharge:- (i) As and when the rate of the HSD, oil or lubricants or rubber products, steel and wages is increased either by levy of excise duty or sales tax or otherwise, a surcharge on passenger fares not exceeding four paise per passenger Km. Subject to a minimum of 25 paise is liveable.

(ii) For the use of Bus-station built at a cost of Rs 50 lakh or more, a surcharge not exceeding one rupee per head is liveable together with journey fare or separately.

By Order and in the name of the Governor of Karnataka,

***R. PRABHUSHANKAR***
Desk Officer
Transport Department

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಗುರುವಾರ, ನವೆಂಬರ್ ೨೨, ೨೦೧೨ (ಮಾರ್ಗಶಿರ ೧, ಶಕ ವರ್ಷ ೧೯೩೪) | ನಂ. ೮೪೦ |
|---|---|---|

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಅಧಿಸೂಚನೆ**

(ಕನ್ನಡ ತರ್ಜುಮೆ)

**ಸಂಖ್ಯೆ: ಪಸಂಮೀ 94 ಪಸಸೇ 2009, ಬೆಂಗಳೂರು, ದಿನಾಂಕ: 22–11–2012**

ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು (ಪಶುವೈದ್ಯರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು 2012 ಸಂಬಂಧ ಕರಡನ್ನು ದಿನಾಂಕ: 29–09–2012 ರ ಅಧಿಸೂಚನೆ ಸಂಖ್ಯೆ: ಪಸಂಮೀ 94 ಪಸಸೇ 2009ನ್ನು ಕರ್ನಾಟಕ ವಿಶೇಷ ರಾಜ್ಯಪತ್ರ ದಿನಾಂಕ: 01–10–2012 ರ ಸಂಚಿಕೆಯ ಭಾಗ IV-A ನಂ 691 ರಲ್ಲಿ, ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ಅಧಿನಿಯಮ, 1978 ರ (1990 ರ ಕರ್ನಾಟಕ ಅಧಿನಿಯಮ 14) 8ನೇ ಪ್ರಕರಣದ (1) ನೇ ಉಪ ಪ್ರಕರಣದೊಂದಿಗೆ ಓದಲಾದ 3 ನೇ ಪ್ರಕರಣದಲ್ಲಿ ವಿಧಿಸಿದಂತೆ 3 ನೇ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿದ್ದು, ಇದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಅಧಿಕೃತ ರಾಜ್ಯಪತ್ರದಲ್ಲಿ ಕರಡು ಪ್ರಕಟಣೆಯಾದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ ಕಳುಹಿಸಲು ಆಹ್ವಾನಿಸಲಾಗಿತ್ತು.

ಸದರಿ ರಾಜ್ಯಪತ್ರವನ್ನು ದಿನಾಂಕ:1 ನೇ ಅಕ್ಟೋಬರ್ 2012 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿತ್ತು.

ಸದರಿ ಪ್ರಕಟಣೆಗಳಿಗೆದುರಾಗಿ ಆಕ್ಷೇಪಣೆ ಮತ್ತು ಸೂಚನೆಗಳು ರಾಜ್ಯ ಸರ್ಕಾರದಿಂದ ಸ್ವಿಕರಿಸಲ್ಪಟ್ಟರುವುದಿಲ್ಲ

ಈಗ, ಕರ್ನಾಟಕ ಸರ್ಕಾರಿ ಸೇವೆಗಳ ಅಧಿನಿಯಮ, 1978 (1990 ರ ಕರ್ನಾಟಕ ಅಧಿನಿಯಮ 14) ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3 ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸಿದೆ. ಎಂದರೆ:–

**ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು (ಪಶುವೈದ್ಯರ ನೇಮಕಾತಿ) (ವಿಶೇಷ ನೇಮಕಾತಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು, 2006 ಅಥವಾ ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯ ಸೇವೆಗಳು

(ನೇಮಕಾತಿ) ನಿಯಮಗಳು, 1965 ಅಥವಾ ಸರ್ಕಾರಿ ಸೇವಾ ಅಧಿನಿಯಮ 1978 ರ (1990 ರ ಕರ್ನಾಟಕ ಅಧಿನಿಯಮ 14) ಮೇರೆಗೆ ರಚಿಸಲಾದ ಅಥವಾ ರಚಿಸಲಾಗಿದೆ ಎಂದು ಭಾವಿಸಲಾದ ಯಾವುದೇ ಇತರ ನಿಯಮಗಳಲ್ಲಿ ಏನೇ ಒಳಗೊಂಡಿದ್ದಾಗ್ಯೂ ಪಶುವೈದ್ಯಾಧಿಕಾರಿಗಳ ನೇಮಕಾತಿ ಕುರಿತಂತೆ ಏನೇ ಇದ್ದರೂ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳಲ್ಲಿ, ಅನುಸೂಚಿಯಲ್ಲಿ ನಮೂದಿಸಿದ ನೇರನೇಮಕಾತಿ ಹುದ್ದೆಗಳಾದ 391 ಪಶು ವೈದ್ಯಾಧಿಕಾರಿಗಳ ಪ್ರವರ್ಗದ ನೇರ ನೇಮಕಾತಿ ರಿಕ್ತ ಸ್ಥಾನಗಳಿಗೆ ಈ ನಿಯಮಗಳ ನೇಮಕಾತಿ ವಿಧಾನ ಅನ್ವಯಿಸತಕ್ಕದ್ದು.

ಒದಗಿಸಿದ ಒಂದಕ್ಕಿಂತ ಹೆಚ್ಚಿನ ನೇಮಕಾತಿಗೆ ಈ ನಿಯಮಗಳು ಅನ್ವಯವಾಗತಕ್ಕದ್ದಲ್ಲ.

**2. ಪರಿಭಾಷೆಗಳು:–** (1) ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:–

(ಅ) 'ಸಮಿತಿ' ಎಂದರೆ ನಿಯಮ 3 ರಡಿ ರಚಿಸಲಾದ ರಾಜ್ಯ ಮಟ್ಟದ ಆಯ್ಕೆ ಸಮಿತಿ.

(ಆ) 'ಅರ್ಹತಾ ಪರೀಕ್ಷೆ' ಎಂದರೆ ಅನುಸೂಚಿಯಲ್ಲಿರುವ ಹುದ್ದೆಗಳ ನೇಮಕಾತಿಗೆ ಪದವಿಯಾಗಿ ನಿಗದಿಪಡಿಸಿದ ಕನಿಷ್ಟ ವಿದ್ಯಾರ್ಹತೆ.

(ಇ) 'ಅನುಸೂಚಿ' ಎಂದರೆ ಈ ನಿಯಮಗಳಿಗೆ ಸೇರಿಸಲಾದ ಅನುಸೂಚಿ.

(ಈ) 'ಖಾಲಿ ಸ್ಥಾನ' ಎಂದರೆ ಈ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗುವ ಖಾಲಿ ಹುದ್ದೆಗಳು.

(ಉ) ಈ ನಿಯಮಗಳಲ್ಲಿ ಬಳಸಲಾಗಿರುವ ಆದರೆ ಪರಿಭಾಷಿಸಿಲ್ಲದ ಇತರೆ ಪದಗಳು ಮತ್ತು ವ್ಯಾಖ್ಯಾನಗಳು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಅನುಕ್ರಮವಾಗಿ ಅವುಗಳಿಗೆ ನೀಡಲಾದ ಅರ್ಥಗಳನ್ನು ಹೊಂದಿರತಕ್ಕದ್ದು.

**3. ರಾಜ್ಯ ಮಟ್ಟದ ಆಯ್ಕೆ ಸಮಿತಿ:–** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿರುವುದಕ್ಕೆ ತದ್ವಿರುದ್ಧವಾಗಿ ಏನೇ ಇದ್ದರೂ ಅಥವಾ ಪಶುವೈದ್ಯಾಧಿಕಾರಿಗಳ ವೃಂದದ ನೇಮಕಾತಿಗೆ ವಿಶೇಷವಾಗಿ ಮಾಡಿದ ನಿಯಮದಂತೆ ರಾಜ್ಯಮಟ್ಟದ ನೇಮಕಾತಿ ಸಮಿತಿ (ಇನ್ನು ಮುಂದೆ ಸಮಿತಿ ಎಂದು ಉಲ್ಲೇಖಿಸುವ) ಕೆಳಗಿನಂತೆ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು. ಅಂದರೆ :–

| | | |
|---|---|---|
| 1) | ಆಯುಕ್ತರು<br>ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | : ಅಧ್ಯಕ್ಷರು |
| 2) | ನಿರ್ದೇಶಕರು<br>ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | : ಸದಸ್ಯರು |
| 3) | ಆಯುಕ್ತರು<br>ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು<br>ಅಥವಾ ಜಂಟಿ ಆಯುಕ್ತರ ದರ್ಜೆಗೆ ಕಡಿಮೆಯಿಲ್ಲದ ಅವರ ಪ್ರತಿನಿಧಿ. | : ಸದಸ್ಯರು |
| 4) | ನಿರ್ದೇಶಕರು<br>ಬುಡಕಟ್ಟು ಕಲ್ಯಾಣ ಇಲಾಖೆ, ಬೆಂಗಳೂರು<br>ಅಥವಾ ಅವರ ಪ್ರತಿನಿಧಿ. | : ಸದಸ್ಯರು |
| 5) | ನಿರ್ದೇಶಕರು<br>ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು<br>ಅಥವಾ ಅವರ ಪ್ರತಿನಿಧಿ. | : ಸದಸ್ಯರು |
| 6) | ನಿರ್ದೇಶಕರು,<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು<br>ಅಥವಾ ಅವರ ಪ್ರತಿನಿಧಿ. | : ಸದಸ್ಯರು |
| 7) | ನಿರ್ದೇಶಕರು<br>ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ,<br>ಬೆಂಗಳೂರು ಅಥವಾ ಅವರ ಪ್ರತಿನಿಧಿ. | : ಸದಸ್ಯರು |
| 8) | ಜಂಟಿ ನಿರ್ದೇಶಕರು (ಆಡಳಿತ),<br>ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಆಯುಕ್ತಾಲಯ, ಬೆಂಗಳೂರು. | : ಸದಸ್ಯ–ಕಾರ್ಯದರ್ಶಿ |

**4. ನೇಮಕಾತಿ ವಿಧಾನ:–** (1) ಸಮಿತಿಯ ಈ ನಿಯಮದಡಿ ಭರ್ತಿ ಮಾಡಬೇಕಾದ ಖಾಲಿ ಹುದ್ದೆಗಳನ್ನು ಗಮನದಲ್ಲಿರಿಸಿಕೊಂಡು, ಅರ್ಹತಾ ಷರತ್ತು, ಆಯ್ಕೆ ವಿಧಾನ, ಭರ್ತಿ ಮಾಡಲಾಗುವ ಹುದ್ದೆಗಳ ಸಂಖ್ಯೆ ಮತ್ತು ಯಾವುದೇ ಕಾನೂನಿನಡಿ ಮತ್ತು ಯಾವುದೇ ಆದೇಶಗಳಡಿ ಒದಗಿಸಲಾದ ಮೀಸಲಾತಿಯಂತೆ ತತ್ಕಾಲಕ್ಕೆ ಜಾರಿಯಲ್ಲಿರುವ ವರ್ಗೀಕರಿಸಿದ ಹುದ್ದೆಗಳನ್ನಾಧರಿಸಿ ಅಧಿಕೃತ ರಾಜ್ಯಪತ್ರದಲ್ಲಿ ನಿರ್ಧಿಷ್ಟಪಡಿಸಿ, ಉದ್ದೇಶಿತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು. ಆ ಜಾಹಿರಾತಿನ ಸಾರಾಂಶವನ್ನು ರಾಜ್ಯದಲ್ಲಿ ಹೆಚ್ಚು ಪ್ರಸಾರವಾಗುವ ಎರಡು ದಿನಪತ್ರಿಕೆಗಳಲ್ಲಿ ಪ್ರಕಟಿಸತಕ್ಕದ್ದು. ಅದರಲ್ಲಿ ಒಂದು ಕನ್ನಡವಾಗಿರತಕ್ಕದ್ದು.

(2) ಉಪ ನಿಯಮ (1) ರ ಪ್ರಕಟಣೆಗೆ ಅನುಗುಣವಾಗಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಲ್ಲಿನ ಅರ್ಹತಾನುಸಾರ ನೇಮಕಾತಿಗೆ ಅರ್ಹತೆ ಪಡೆದ ಅಭ್ಯರ್ಥಿಗಳ ಪಟ್ಟಿಯನ್ನು ಅರ್ಹತಾ ಪರೀಕ್ಷೆಯಲ್ಲಿ ಪಡೆದ ಶೇಕಡಾವಾರು ಒಟ್ಟು ಅಂಕಗಳು ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಡಿ ಮತ್ತು ಆದೇಶಗಳಡಿ ಹುದ್ದೆಗಳಿಗೆ ಒದಗಿಸಿದ ಮೀಸಲಾತಿಯಂತೆ ನೇಮಕಾತಿಗೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ಸಮಿತಿ ಸಿದ್ಧಪಡಿಸತಕ್ಕದ್ದು.

(3) ಉಪ ನಿಯಮ (2) ರಂತೆ ಆಯ್ಕೆ ಮಾಡಲಾಗುವ ಅಭ್ಯರ್ಥಿಗಳ ಸಂಖ್ಯೆಯು ಪ್ರಕಟಿಸಿದ ಖಾಲಿ ಹುದ್ದೆಗಳಿಗೆ ಅನುಗುಣವಾಗಿರತಕ್ಕದ್ದು.

(4) ಇಬ್ಬರು ಅಥವಾ ಹೆಚ್ಚಿನ ಅಭ್ಯರ್ಥಿಗಳು ಸಮಾನ ಅಂಕಗಳನ್ನು ಪಡೆದ ಪಕ್ಷದಲ್ಲಿ ಅಂತಹ ಅಭ್ಯರ್ಥಿಗಳ ಶ್ರೇಣಿಯನ್ನು ಅವರ ವಯಸ್ಸಿನ ಆಧಾರದ ಮೇಲೆ, ವಯಸ್ಸಿನಲ್ಲಿ ಹಿರಿಯನಾದವನನ್ನು ಕಿರಿಯವನಿಗಿಂತ ಮೇಲಿರಿಸಿ ನಿರ್ಧರಿಸತಕ್ಕದ್ದು. ಅರ್ಹ ಅಭ್ಯರ್ಥಿಗಳ ಸಂಖ್ಯೆಯ ಪಟ್ಟಿ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಹುದ್ದೆಗಳಿಗನುಗುಣವಾಗಿರತಕ್ಕದ್ದು.

(5) ಉಪ ನಿಯಮ (2) ರಂತೆ ತಯಾರಿಸಲಾದ ಪಟ್ಟಿಯಲ್ಲಿ ಸೇರ್ಪಡೆಯಾಗದಂತಹ ಅಭ್ಯರ್ಥಿಗಳ ಹೆಚ್ಚುವರಿ ಪಟ್ಟಿಯನ್ನು ಸಹ ಸಮಿತಿಯು ತಯಾರಿಸತಕ್ಕದ್ದು. ಹೆಚ್ಚುವರಿ ಪಟ್ಟಿಯಲ್ಲಿ ಸೇರಿಸಬೇಕಾದ ಅಭ್ಯರ್ಥಿಗಳ ಸಂಖ್ಯೆಯು ಸಾದ್ಯವಾದಷ್ಟು ಮಟ್ಟಿಗೆ ಉಪ ನಿಯಮ (2) ರಡಿಯಲ್ಲಿ ತಯಾರಿಸಲಾದ ಆಯ್ಕೆ ಪಟ್ಟಿಯ ಪ್ರತಿಯೊಂದು ಮೀಸಲಾತಿ ವೃಂದಗಳ (ಸಮತಲ ಮತ್ತು ನೇರ) ಶೇಕಡಾ. 10 ರಷ್ಟಿರತಕ್ಕದ್ದು. ಹೆಚ್ಚುವರಿ ಪಟ್ಟಿಯಲ್ಲಿ ಉಪ ನಿಯಮ (2) ರಂತೆ ಪ್ರತಿ ಮೀಸಲಾತಿ ವೃಂದದಲ್ಲಿ (ಸಮತಲ ಮತ್ತು ನೇರ) ಕನಿಷ್ಟ ಪಕ್ಷ ಒಬ್ಬ ಅಭ್ಯರ್ಥಿಯಾದರೂ ಇರಬೇಕು. ಉಪ ನಿಯಮ (2) ರಂತೆ ಆಯ್ಕೆ ಪಟ್ಟಿಯಲ್ಲಿ ಸೇರಿಸಲಾದ ಅಭ್ಯರ್ಥಿಯು ನಿರ್ಧಿಷ್ಟಪಡಿಸಿದ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾಗಲು ವಿಫಲವಾದಲ್ಲಿ, ಕರ್ತವ್ಯಕ್ಕೆ ಹಾಜರಾಗಲು ವಿಫಲನಾದ ಅದೇ ಮೀಸಲಾತಿ ವೃಂದಕ್ಕೆ ಸೇರಿದ ಹೆಚ್ಚುವರಿ ಪಟ್ಟಿಯಲ್ಲಿರುವ ಅಂತಹ ಅಭ್ಯರ್ಥಿಯನ್ನು ನೇಮಕಾತಿ ಮಾಡತಕ್ಕದ್ದು.

(6) ಉಪನಿಯಮ (2) ಮತ್ತು (5) ರಂತೆ ಸಿದ್ಧಪಡಿಸಿದ ಪಟ್ಟಿಯನ್ನು ರಾಜ್ಯಪತ್ರದಲ್ಲಿ ಮತ್ತು ಸಮಿತಿಯ ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸತಕ್ಕದ್ದು.

(7) ಸಮಿತಿ ಆಯ್ಕೆ ಮಾಡಿದ ಅಭ್ಯರ್ಥಿಗಳ ಪಟ್ಟಿ ಮತ್ತು ನೇಮಕಾತಿ ಪ್ರಾಧಿಕಾರಕ್ಕೆ ನೀಡಿದ ಪಟ್ಟಿಯಲ್ಲಿನ ಪ್ರಕಟಿತ ಎಲ್ಲಾ ಹುದ್ದೆಗಳು ಭರ್ತಿಯಾಗುವವರೆಗೆ ಅಥವಾ ಆಯ್ಕೆ ಪಟ್ಟಿ ಪ್ರಕಟವಾದ ದಿನಾಂಕದಿಂದ 1 ವರ್ಷದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಿಂಧುವಾಗಿರತಕ್ಕದ್ದು.

**5. ಅಭ್ಯರ್ಥಿಗಳ ನೇಮಕಾತಿ:–** (1) ನಿಯಮ 4 ರಡಿಯಲ್ಲಿ ತಯಾರಿಸಲಾದ ಆಯ್ಕೆ ಪಟ್ಟಿಯಲ್ಲಿ ಯಾವ ಅಭ್ಯರ್ಥಿಗಳ ಹೆಸರು ಸೇರ್ಪಡೆಯಾಗುತ್ತದೋ, ಅವರ ಹೆಸರು, ಖಾಲಿ ಹುದ್ದೆಗಳ ರಿಕ್ತ ಸ್ಥಾನದ ಯಾವ ಒಂದು ಕ್ರಮದಲ್ಲಿ ಬರುತ್ತದೋ ಆ ಪಟ್ಟಿಯನ್ನು ನೋಡಿಕೊಂಡು, ಅಗತ್ಯವೆನಿಸಿದ ವಿಚಾರಣೆಯ ನಂತರ ಪ್ರತಿ ಅಭ್ಯರ್ಥಿ ಎಲ್ಲಾ ವಿಧದಲ್ಲೂ ನೇಮಕಾತಿಗೆ ಅರ್ಹನಾಗಿದ್ದಾನೆ ಎಂಬುದನ್ನು ಮನದಟ್ಟು ಮಾಡಿಕೊಂಡ ನಂತರ ನೇಮಕಾತಿ ಪ್ರಾಧಿಕಾರ ಅವರನ್ನು ನೇಮಕಾತಿ ಮಾಡತಕ್ಕದ್ದು.

(2) ನಿಯಮ 4 ರ ಉಪ ನಿಯಮ (7) ರಂತೆ ಪ್ರಕಟಿಸಲಾದ ಪಟ್ಟಿಯಲ್ಲಿ ಅಭ್ಯರ್ಥಿಯ ಹೆಸರನ್ನು ಸೇರ್ಪಡೆ ಮಾಡಿ ಪ್ರಕಟಿಸಿದ ಮಾತ್ರಕ್ಕೆ ನೇಮಕಾತಿ ಪ್ರಧಾನ ಮಾಡಲು ಹಕ್ಕುಳ್ಳವನಾಗಿರತಕ್ಕದಲ್ಲ.

**6. ಸಾಮಾನ್ಯ ನೇಮಕಾತಿ ನಿಯಮಗಳು ಅನ್ವಯ:–** ಈ ನಿಯಮಗಳಲ್ಲಿ ಅವಕಾಶ ಮಾಡಲಾದ ವಿಷಯಗಳನ್ನು ಹೊರತುಪಡಿಸಿ, ಪ್ರಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿ ಮಾಡಿರುವ ಸದ್ಯಕ್ಕೆ ಚಾಲ್ತಿಯಲ್ಲಿರುವ ಅವಕಾಶಗಳು ಈ ನಿಯಮದಡಿಯಲ್ಲಿ ಮಾಡುವ ನೇಮಕಾತಿಗಳಿಗೆ ಅನ್ವಯವಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಪ್ರಸನ್ನ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ)

**ಅನುಸೂಚಿ**

**(ನಿಯಮ 3 ನ್ನು ನೋಡಿ)**

| ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಭರ್ತಿಮಾಡಲಾಗುವ ಹುದ್ದೆಗಳ ಸಂಖ್ಯೆ | ಕನಿಷ್ಠ ವಿದ್ಯಾರ್ಹತೆ. |
|---|---|---|
| ಪಶುವೈದ್ಯಾಧಿಕಾರಿ<br>(ರೂ. 26,000 – 47,700) | 391 | ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿಸಲಾದ ಯಾವುದೇ ಪಶುವೈದ್ಯಕೀಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಥವಾ ಕೃಷಿ ವಿಶ್ವವಿದ್ಯಾಲಯದಿಂದ ಬಿ.ವಿ.ಎಸ್ಸಿ. ಮತ್ತು ಎ.ಹೆಚ್. ಪದವಿ ಪಡೆದಿರಬೇಕು.<br>ಪಶುವೈದ್ಯಕೀಯ ಪರಿಷತ್ತು ಅಧಿನಿಯಮ 1984 ರ ಪ್ರಕಾರ ತನ್ನ ಹೆಸರನ್ನು ಕರ್ನಾಟಕ ಪಶುವೈದ್ಯಕೀಯ ಪರಿಷತ್ತಿನಲ್ಲಿ ನೋಂದಾಯಿಸಿರಲೇಬೇಕು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಪ್ರಸನ್ನ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

## *ANIMAL HUSBANDRY AND FISHERIES SECRETARIAT*

### *NOTIFICATION*

### *No. AHF 94 VAH 2009, Bangalore, dated:- 22-11-2012*

Whereas, the draft of the Karnataka Animal Husbandry & Veterinary Services (Recruitment of Veterinary Officers) (Special Recruitment) Rules, 2012, was published as required by clause (a) of sub-section (2) of section 3 of the Karnataka State Civil Services Act, 1978 (Karnataka Act 14 of 1990) Notification No. AHF 94 VAH 2009, dated; 29th September 2012 in Part IV-A No. 691 of the Karnataka Extraordinary Gazette dated 1st October 2012. Inviting objections/suggestions from all persons likely to be affected thereby within fifteen days from the date of its publication in the Official Gazette.

And whereas, the said Gazette was made available to the public on 1st October 2012;

And whereas, no objections/suggestions have been received by the State Government;

Now, therefore, in exercise of the powers conferred by sub section (1) of section 3 read with section 8 of Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely;-

### *RULES*

***1. Title and commencement:-*** (1) These rules may be called the Karnataka Animal Husbandry and Veterinary Services (Recruitment of Veterinary Officers) (Special Recruitment) Rules, 2012.

(2) These Rules shall come into force from the date of their publication in the Official Gazette.

(3) Notwithstanding anything contained in the Karnataka Civil Services (General Recruitment) Rules, 1977 or the Karnataka Civil Services (Direct – Recruitment by Competitive Examination and Selection) (General) Rules, 2006 or in the Karnataka Animal Husbandry and Veterinary Services (Recruitment) Rules, 1965, or in any other rules made or deemed to have been made, under the Karnataka State Civil Services Act, 1978 (Karnataka Act 14 of 1990) pertaining to the method of recruitment to Veterinary Officers the provisions of these rules shall apply to recruitment of 391 direct recruitment vacancies in the categories of posts of Veterinary officers in the Animal Husbandry and Veterinary Services as specified in the Schedule.

Provided that nothing in these rules shall apply to more than one recruitment

***2. Definitions:-*** (1) In these rules unless the context otherwise requires:-

(a) "Committee" means the State Level Selection Committee constituted under rule 3;

(b) "Qualifying Examination" means the examination leading to a degree specified as minimum qualification for recruitment to the posts in the schedule

(c) "Schedule" means a Schedule appended to these rules;

(d) "Vacancies" mean the number of vacant posts to be filled up under these rules.

(e) Other words and expressions used in these rules, but not defined shall have the same meaning assigned to them in the Karnataka Civil Services (General Recruitment) Rules, 1977.

***3. State Level Selection Committee :-*** Notwithstanding anything to the contrary contained in the Karnataka Civil Services (General Recruitment) Rules, 1977 or rules of recruitments specially made for recruitment to the categories of posts of Veterinary Officers, recruitment shall be made under these rules by the State Level Selection Committee (hereinafter referred to as Committee) consisting of the following members, namely :-

| | | | |
|---|---|---|---|
| (1) | The Commissioner of Animal Husbandry and Veterinary Services Department, Bangalore. | : | Chairman |
| (2) | The Director of Animal Husbandry and Veterinary Services Department, Bangalore. | : | Member |
| (3) | The Commissioner of Social Welfare Department, Bangalore or his representatives not below the rank of Joint Commissioner. | : | Member |
| (4) | The Director of Tribal Welfare Department, Bangalore or his representative. | : | Member |
| (5) | The Director of Backward Classes or his representative | : | Member |
| (6) | The Director of Minority Welfare Department, Bangalore or his representative. | : | Member |
| (7) | The Director of Women and Children Welfare Department Bangalore or his representative. | : | Member |
| (8) | The Joint Director (Administration ) Commissionerate of Animal Husbandry and Veterinary Services, Bangalore | : | Member-secretary |

***4. Method of Recruitment :-*** (1) The Committee shall, after taking into consideration the vacancies to be filled up under these rules, advertise the vacancies in the Official Gazette specifying the conditions of eligibility, nature of selection, number of vacancies to be filled and classification in accordance with reservation of posts provided by or under any law or any order for the time being in force, invite applications from the intending candidates. Abstract of such advertisement shall also be published in two daily newspapers having wide circulation in the State of which one shall be in Kannada.

(2) The Committee shall from among the candidates who have applied in pursuance to the publication made under sub-rule (1), prepare in the order of merit, a selection list of candidates eligible for appointment under these rules on the basis of aggregate percentage of marks secured in the qualifying examination and the reservation of posts provided by or under any law or any order for the time being in force.

(3) The number of candidates to be selected under sub-rule (2) shall be equal to the number of vacancies notified.

(4) If the marks secured by two or more candidates is equal, then the order of merit in respect of such candidates shall be fixed on the basis of their age, the older in age being placed above the younger. The number of candidates to be included in such list of eligible candidates shall be equal to number of vacancies specified in the schedule.

(5) The Committee shall also prepare an additional list of such of the candidates not included in the list prepared under sub-rule (2) The number of candidates to be included in the additional list shall be as far as possible 10% of the number of candidates in each of the reservation categories (horizontal and vertical) in the list under sub-rule (2). There shall be atleast one candidate in the additional list belonging to each of the reservation categories (horizontal and vertical) represented in the list under sub-rule (2). If a candidate whose name is included in the list under sub-rule (2) fails to report for duty within the prescribed period, to that extent a candidate belonging to the same reservation category as that of the candidate who failed to report for duty shall be appointed from the additional list.

(6) The lists so prepared under sub-rule (2) and (5) shall be published in the Official Gazette and also on the notice board of the office of the Commissioner.

(7) The list of candidates selected by the Committee and assigned to the appointing authority shall be valid till all the notified vacancies are filled or till the completion of 1 year from the date of publication of the selected list whichever is earlier.

***5. Appointment of candidates:-*** (1) Candidates whose names are included in the selection list prepared under rule 4 may be appointed by the appointing authority in the vacancies in the order of which their names are found in the list after satisfying itself after such enquiry as it may consider necessary that each of the candidates is suitable in all respects for appointment.

(2) The inclusion of name of a candidate in the list published under sub-rule (7) of rule 4 shall not confer any right of appointment.

***6. Application of general recruitment rules:-*** Except in respect of matters for which provision is made in these rules, the provisions of the Karnataka State Civil Services (General Recruitment) Rules, 1977 for the time being in force, shall be applicable for the purpose of recruitment under these rules.

By Order and in the Name of the Governor of Karnataka,

***H. PRASANNA***
(Desk Officer-2)
Animal Husbandry and Fisheries Department,
(Animal Husbandry-A)

**SCHEDULE**

**(See rule 3)**

| *Category of post and scale of pay* | *No. of posts to be filled* | *Minimum Qualification* |
|---|---|---|
| Veterinary Officer<br>(Rs. 26000 - 47700) | 391 | Must be holder of a B.V.Sc. & A.H degree from any University of Veterinary Sciences or Agricultural Sciences established by law in India.<br>Must have Registered his name in the Karnataka Veterinary Council as per the Veterinary Council Act, 1984 |

By Order and in the Name of the Governor of Karnataka,

**H. PRASANNA**
(Desk Officer-2)
Animal Husbandry and Fisheries Department,
(Animal Husbandry-A)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ನವೆಂಬರ್ ೨೨, ೨೦೧೨ (ಮಾರ್ಗಶಿರ ೧, ಶಕ ವರ್ಷ ೧೯೩೪) | ನಂ. ೮೪೧ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 26 ಹೆಚ್‌ಇಟಿ 2003, ಬೆಂಗಳೂರು, ದಿನಾಂಕ: 20.11.2012**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (2)ನೇ ಉಪಪ್ರಕರಣ (ಎ) ಖಂಡದ ಮೂಲಕ ಅಗತ್ಯ ಪಡಿಸಲಾದಂತೆ, ಅಧಿಸೂಚನೆ ಸಂಖ್ಯೆ: ಡಿಪಿಎಆರ್ 26 ಹೆಚ್‌ಇಟಿ 2003, ದಿನಾಂಕ: 03ನೇ ಅಕ್ಟೋಬರ್ 2012ರಲ್ಲಿ ಕರ್ನಾಟಕ ಸಾಮಾನ್ಯ ಸೇವೆಗಳ (ಸರ್ಕಾರಿ ಅತಿಥಿ ವ್ಯವಸ್ಥೆ ನೇಮಕಾತಿ) ತಿದ್ದುಪಡಿ ನಿಯಮಗಳು 2012ರ ಕರಡನ್ನು, ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯ ಭಾಗ–IVಎ ರಲ್ಲಿ, ಪ್ರಕಟಿಸಿ, ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳೊಳಗೆ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಪಡಿಸಲಾಗಿದೆ.

ಮತ್ತು ಸದರಿ ರಾಜ್ಯಪತ್ರವು, ದಿನಾಂಕ: 05ನೇ ಅಕ್ಟೋಬರ್ 2012ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿದೆ.

ಮತ್ತು ಸದರಿ ನಿಗದಿತ ಅವಧಿಯಲ್ಲಿ ಯಾವುದೇ ಸಲಹೆಗಳು ಮತ್ತು ಆಕ್ಷೇಪಣೆಗಳನ್ನು ಬಾಧಿತರಿಂದ ಸ್ವೀಕರಿಸಿಲ್ಲದಿರುವುದರಿಂದ:

ಈಗ, ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಡನೆ ಓದಿಕೊಂಡಂತೆ ಇದರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಈ ಮೂಲಕ ಈ ಕೆಳಗಿನಂತೆ ನಿಯಮಗಳನ್ನು ರಚಿಸುತ್ತದೆ, ಎಂದರೆ:–

### ನಿಯಮಗಳು

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಾಮಾನ್ಯ ಸೇವೆಗಳ (ಸರ್ಕಾರಿ ಅತಿಥಿ ಸಂಸ್ಥೆ ನೇಮಕಾತಿ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದು.

(2) ಇವು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ.**– ಕರ್ನಾಟಕ ಸಾಮಾನ್ಯ ಸೇವೆಗಳ (ಸರ್ಕಾರಿ ಅತಿಥಿ ವ್ಯವಸ್ಥೆ ನೇಮಕಾತಿ) ನಿಯಮಗಳು, 1986ರ ಅನುಸೂಚಿಯಲ್ಲಿ "ಬಿ ಕರ್ನಾಟಕ ಭವನ" ಶೀರ್ಷಿಕೆ ಅಡಿಯಲ್ಲಿ,–

(i) ಕ್ರ. ಸಂ. 28 ಅಂಕಣ (2)ರಲ್ಲಿ "ಸಹಾಯಕ ಇಂಜಿನಿಯರ್ ಹಾಗೂ ಸಹಾಯಕ ವ್ಯವಸ್ಥಾಪಕ, ಕರ್ನಾಟಕ ಭವನ, ನವದೆಹಲಿ" ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ "ಸಹಾಯಕ ಇಂಜಿನಿಯರ್ ಹಾಗೂ ಸಹಾಯಕ ವ್ಯವಸ್ಥಾಪಕ, ಕರ್ನಾಟಕ ಭವನ, ನವದೆಹಲಿ" ಪದಗಳಿಗೆ ಬದಲಾಗಿ "ಸಹಾಯಕ ಇಂಜಿನಿಯರ್" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ii) ಕ್ರ. ಸಂ. 28 ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 28ಎ | ಕಿರಿಯ ಇಂಜಿನಿಯರ್ (ವಿದ್ಯುತ್‌ಚಕ್ತಿ) | ಕರ್ನಾಟಕ ಲೋಕೋಪಯೋಗಿ ಇಲಾಖೆಯ ಇಂಜಿನಿಯರಿಂಗ್ ಸೇವೆಗಳಿಂದ ಕಿರಿಯ ಇಂಜಿನಿಯರ್ (ವಿದ್ಯುತ್‌ಚಕ್ತಿ) ವೃಂದದಿಂದ ಅಧಿಕಾರಿಯನ್ನು ನಿಯೋಜನೆ ಮೂಲಕ | |

(iii) ಕ್ರ. ಸಂ. 29ರಲ್ಲಿ "ವ್ಯವಸ್ಥಾಪಕ, ಕರ್ನಾಟಕ ಭವನ" ದ ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 29 | ವ್ಯವಸ್ಥಾಪಕ, ಕರ್ನಾಟಕ ಭವನ | ಸಹಾಯಕ ವ್ಯವಸ್ಥಾಪಕ ಕರ್ನಾಟಕ ಭವನ ವೃಂದದಿಂದ ಬಡ್ತಿ ನೀಡುವ ಮೂಲಕ | ಸಹಾಯಕ ವ್ಯವಸ್ಥಾಪಕ, ಕರ್ನಾಟಕ ಭವನ ವೃಂದದಲ್ಲಿ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. |

(iv) ಕ್ರ. ಸಂ. 30ರಲ್ಲಿ "ಸ್ಟೀವಾರ್ಡ್, ಕರ್ನಾಟಕ ಭವನ" ಹುದ್ದೆ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 30 | ಸಹಾಯಕ ವ್ಯವಸ್ಥಾಪಕ | ಶೇಕಡ 33 ರಷ್ಟು ನೇರ ನೇಮಕಾತಿ ಮೂಲಕ ಮತ್ತು ಶೇಕಡ 67 ರಷ್ಟು ಸ್ವಾಗತಕಾರರು, ಟೆಲಿಫೋನ್ ಆಪರೇಟರ್, ಕರ್ನಾಟಕ ಭವನ ಈ ವೃಂದದಿಂದ ಬಡ್ತಿಯ ಮೂಲಕ | **ನೇರ ನೇಮಕಾತಿಗಾಗಿ:**<br>1. ಪದವಿದರರಾಗಿರಬೇಕು.<br>2. ಸರ್ಕಾರದಿಂದ ಮಾನ್ಯತೆ ಪಡೆದ ಕೆಟರಿಂಗ್ ಸಂಸ್ಥೆಯು ಮಂಜೂರು ಮಾಡಿದ ಕೆಟರಿಂಗ್ ಅಥವಾ ಹೌಸ್ ಕೀಪಿಂಗ್‌ನಲ್ಲಿ ಪ್ರಮಾಣ ಪತ್ರವನ್ನು ಹೊಂದಿರಬೇಕು. ಕೆಟರಿಂಗ್ ಅಥವಾ ಹೌಸ್ ಕೀಪಿಂಗ್‌ನಲ್ಲಿ ಡಿಪ್ಲೊಮಾ ಹೊಂದಿರುವ ಅಭ್ಯರ್ಥಿಗಳಿಗೆ ಆದ್ಯತೆಯನ್ನು ನೀಡಲಾಗುವುದು.<br>**ಬಡ್ತಿಗಾಗಿ:**<br>ಸ್ವಾಗತಗಾರರು/ ಟೆಲಿಫೋನ್ ಆಪರೇಟರ್, ಕರ್ನಾಟಕ ಭವನ ವೃಂದದಲ್ಲಿ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. |

(v) ಕ್ರಮ ಸಂಖ್ಯೆ 31ರಲ್ಲಿ 'ಸ್ಟೋರ್ ಕೀಪರ್, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದು.

(vi) ಕ್ರಮ ಸಂಖ್ಯೆ 32ರಲ್ಲಿ "ಸ್ವಾಗತಗಾರರು, ಕರ್ನಾಟಕ ಭವನ" ಹುದ್ದೆ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 32 | ಸ್ವಾಗತಕಾರರು / ಟೆಲಿಫೋನ್ ಆಪರೇಟರ್ | ಶೇಕಡ ಇಪ್ಪತ್ತೈದರಷ್ಟು ನೇರ ನೇಮಕಾತಿ ಮೂಲಕ. ಮತ್ತು ಶೇಕಡ ಎಪ್ಪತ್ತೈದರಷ್ಟು ಅಟೆಂಡರ್‌ಗಳು, ಜವಾನರು/ ವಾಚ್‌ಮೆನ್, ರೂಮ್‌ಬಾಯ್ಸ್ ಅಥವಾ 'ಡಿ' ಸಮೂಹದ ಕರ್ನಾಟಕ ಭವನ ಯಾವುದೇ ಹುದ್ದೆಯ ಸಂಯೋಜಿತ ಜೇಷ್ಠತೆಯ ಆಧಾರದ ಮೇಲೆ ಬಡ್ತಿ ನೀಡುವ ಮೂಲಕ. ಜೇಷ್ಠತೆಯನ್ನು ಕಡಿಮೆ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವ ವ್ಯಕ್ತಿಗಿಂತ ಹಿರಿಯ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವ ವ್ಯಕ್ತಿಯು ಹಿರಿಯನೆಂದು ನಿರ್ಧರಿಸಲಾಗುವುದು. ಒಂದೇ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವವರ ಆಂತರಿಕ ಜೇಷ್ಠತೆಯನ್ನು ಸಂಬಂಧಿಸಿದ ವೃಂದದಲ್ಲಿ ಅವರ ಸೇವಾ ಅವಧಿಯ ಆಧಾರದ ಮೇಲೆ ಆ ವೃಂದದ ವ್ಯಕ್ತಿಗಳ ನಡುವೆ ನಿರ್ಧರಿಸಲಾಗುತ್ತದೆ. | **ನೇರ ನೇಮಕಾತಿಗಾಗಿ:**<br>1. ಕನ್ನಡ ಭಾಷೆಯನ್ನು ಒಂದು ವಿಷಯವಾಗಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br>2. ಕೆಎಸ್‌ಇಇಬಿ ಯು ನಡೆಸಿದ ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.<br>3. ಸರ್ಕಾರದಿಂದ ಮಾನ್ಯತೆ ಪಡೆದ ಸಂಸ್ಥೆಗಳಿಂದ PBX/PABX/EPAB ಇವುಗಳಲ್ಲಿ ತರಬೇತಿ ಹೊಂದಿರಬೇಕು.<br>**ಬಡ್ತಿಗಾಗಿ:**<br>1. ಅಂಕಣ 3ರಲ್ಲಿ ಸೂಚಿಸಿದ ವೃಂದಗಳಲ್ಲಿ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು.<br>2. ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.<br>3. ಸರ್ಕಾರದಿಂದ ಮಾನ್ಯತೆ ಪಡೆದ ಸಂಸ್ಥೆಯಿಂದ PBX/ PABX / EPAB ಇವುಗಳಲ್ಲಿ ತರಬೇತಿ ಹೊಂದಿರಬೇಕು ಮತ್ತು<br>4. ಸರ್ಕಾರವು ಗೊತ್ತುಪಡಿಸಿದ ಕಂಪ್ಯೂಟರ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. |
| 32ಎ | ದ್ವಿತೀಯ ದರ್ಜೆ ಸಹಾಯಕ (ಶಿಷ್ಟಚಾರ) | ಯಾವುದೇ ರಾಜ್ಯ ಸಿವಿಲ್ ಸೇವೆಯಿಂದ ದ್ವಿತೀಯ ದರ್ಜೆ ಸಹಾಯಕ ವೃಂದದಿಂದ ನೌಕರರನ್ನು ಪ್ರತಿನಿಯೋಜನೆ ಮಾಡುವ ಮೂಲಕ | |

(vii) ಕ್ರಮ ಸಂಖ್ಯೆ 33ರಲ್ಲಿ "ಟೆಲಿಫೋನ್ ಆಪರೇಟರುಗಳು, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

(viii) ಕ್ರಮ ಸಂಖ್ಯೆ 34ರಲ್ಲಿ "ಹಿರಿಯ ಚಾಲಕ, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 34 | ಹಿರಿಯ ಚಾಲಕ | ಚಾಲಕರುಗಳ ವೃಂದದಿಂದ ಬಡ್ತಿ ನೀಡುವ ಮೂಲಕ | ಚಾಲಕರುಗಳ ವೃಂದದಲ್ಲಿ ಹತ್ತು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. |

(ix) ಕ್ರಮ ಸಂಖ್ಯೆ 35ರಲ್ಲಿ "ಬಟ್ಲರ್ ಗ್ರೇಡ್–II, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ, ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 35 | ಕುಕ್ ಗ್ರೇಡ್–I | ಕುಕ್ ಗ್ರೇಡ್ 2ರ ವೃಂದದಿಂದ ಬಡ್ತಿ ಮೂಲಕ | 1. ಕುಕ್ ಗ್ರೇಡ್ 2ರ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು.<br>2. ಸ್ವತ: ಅಡುಗೆ ಮಾಡುವುದರ ಜೊತೆಗೆ ಇತರರೂ ಮಾಡುವ ಅಡುಗೆ ಕೆಲಸದ ಮೇಲ್ವಿಚಾರಣೆಯಲ್ಲೂ ಸಹ ಸಮರ್ಥರಾಗಿರಬೇಕು. |

(x) ಕ್ರಮ ಸಂಖ್ಯೆ 36ರಲ್ಲಿ "ಎಲೆಕ್ಟ್ರಿಷಿಯನ್– ಕಂ–ಪ್ಲಂಬರ್, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 36 | ಎಲೆಕ್ಟ್ರಿಷಿಯನ್–ಕಂ–ಪ್ಲಂಬರ್ | ಕೇಂದ್ರ ಲೋಕೋಪಯೋಗಿ ಇಲಾಖೆ ಅಥವಾ ಕರ್ನಾಟಕ ಲೋಕೋಪಯೋಗಿ ಇಂಜಿನಿಯರಿಂಗ್ ಇಲಾಖೆ, ನವದೆಹಲಿ, ಮುನಿಸಿಪಲ್ ಕಮಿಟಿ ಅಥವಾ ದೆಹಲಿ ಅಭಿವೃದ್ಧಿ ಪ್ರಾಧಿಕಾರ ಇವುಗಳಿಂದ ತತ್ಸಮಾನ ವೃಂದದಲ್ಲಿನ ಎಲೆಕ್ಟ್ರಿಷಿಯನ್ –ಕಂ–ಪ್ಲಂಬರ್ ನ ಪ್ರತಿಯೋಜನೆ ಮೂಲಕ | |
| 36(ಎ) | ಸೀನಿಯರ್ ಎಲೆಕ್ಟ್ರಿಷಿಯನ್ | ಎಲೆಕ್ಟ್ರಿಷಿಯನ್ ವೃಂದದಿಂದ ಬಡ್ತಿ ನೀಡುವ ಮೂಲಕ | ಎಲೆಕ್ಟ್ರಿಷಿಯನ್ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. |
| 36(ಬಿ) | ಸೀನಿಯರ್ ಪ್ಲಂಬರ್ | ಪ್ಲಂಬರ್ ವೃಂದದಿಂದ ಬಡ್ತಿ ನೀಡುವ ಮೂಲಕ | ಪ್ಲಂಬರ್ ವೃಂದದಲ್ಲಿ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು. |

(xi) ಕ್ರ. ಸಂ. 37ರಲ್ಲಿ "ಅಟೆಂಡರ್, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 37 | ಅಟೆಂಡರ್ | ಆಂತರಿಕ ಸೇವಾ ಜೇಷ್ಠತೆಯ ಆಧಾರದ ಮೇಲೆ 'ಡಿ' ಸಮೂಹದ ಸೇವೆಗಳ ವೃಂದದಿಂದ ಬಡ್ತಿ ನೀಡುವ ಮೂಲಕ.<br>ಇಂಟರ್‌ಸೆ–ಜೇಷ್ಠತೆಯನ್ನು ಕಡಿಮೆ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವ ವ್ಯಕ್ತಿಗಿಂತ ಹಿರಿಯ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವ ವ್ಯಕ್ತಿಯು ಹಿರಿಯನೆಂದು ನಿರ್ಧರಿಸಲಾಗುವುದು. ಹಾಗೂ ಸಮಾನ ವೇತನವನ್ನು ಹೊಂದಿರುವ ನೌಕರರ ಜೇಷ್ಠತೆಯನ್ನು ಸೇವಾ ಹಿರಿತನವನ್ನು ಗಣನೆಗೆ ತೆಗೆದುಕೊಂಡು ಜೇಷ್ಠತೆಯನ್ನು ಪರಿಗಣಿಸಬಹುದಾಗಿದೆ. | ಜವಾನ ಹಾಗೂ ಕಾವಲುಗಾರ /ಮಾಲಿ ಹಾಗೂ ಸ್ವೀಪರ್, ಕರ್ನಾಟಕ ಭವನ ವೃಂದದಲ್ಲಿ ಹತ್ತು ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರಬೇಕು |

(xii) ಕ್ರ. ಸಂ. 38ರಲ್ಲಿ "ಚಾಲಕ, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 38 | ಚಾಲಕ | ಶೇಕಡ ಐವತ್ತರಷ್ಟು ನೇರ ನೇಮಕಾತಿ ಮೂಲಕ ಮತ್ತು ಶೇಕಡ ಐವತ್ತರಷ್ಟನ್ನು ಸಂಯುಕ್ತ ಜೇಷ್ಠತೆಯ ಆಧಾರದ ಮೇಲೆ ಸಮೂಹ 'ಡಿ' ಸೇವೆಗಳಲ್ಲಿನ ಯಾವುದೇ ವೃಂದದಿಂದ ಬಡ್ತಿ ನೀಡುವ ಮೂಲಕ. ಜೇಷ್ಠತೆಯನ್ನು ಕಡಿಮೆ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವ ವ್ಯಕ್ತಿಗಿಂತ ಹಿರಿಯ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವ ವ್ಯಕ್ತಿಯು ಹಿರಿಯನೆಂದು ನಿರ್ಧರಿಸಲಾಗುವುದು. ಒಂದೇ ವೇತನ ಶ್ರೇಣಿಯ ಹುದ್ದೆಯನ್ನು ಹೊಂದಿರುವವರ ಆಂತರಿಕ ಜೇಷ್ಠತೆಯನ್ನು ಸಂಬಂಧಿಸಿದ ವೃಂದದಲ್ಲಿ ಅವರ ಸೇವಾ ಅವಧಿಯ | **ನೇರ ನೇಮಕಾತಿಗಾಗಿ:**<br>1. ಕನ್ನಡವನ್ನು ಒಂದು ವಿಷಯವಾಗಿ ಎಸ್‌ಎಸ್‌ಎಲ್‌ಸಿ ಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.<br>2. ಲಘು ವಾಹನ ಚಾಲನೆಗಾಗಿ ಚಾಲ್ತಿ ಚಾಲನ ಲೈಸೆನ್ಸ್ ಹೊಂದಿರಬೇಕು.<br>3. ಸರ್ಕಾರವು ಮಾನ್ಯತೆ ನೀಡಿದ ಸಂಸ್ಥೆಯೊಂದರಿಂದ ಚಾಲಕನಾಗಿ ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅನುಭವ ಹೊಂದಿರಬೇಕು ಮತ್ತು ಸರ್ಕಾರವು ಮಾನ್ಯತೆ ನೀಡಿದ ಸಂಸ್ಥೆಯಿಂದ ಪ್ರಥಮ ಚಿಕಿತ್ಸಾ ಪ್ರಮಾಣ ಪತ್ರ ಹೊಂದಿರಬೇಕು. |

| | | | |
|---|---|---|---|
| | | ಆಧಾರದ ಮೇಲೆ ಆ ವೃಂದದ ವ್ಯಕ್ತಿಗಳ ನಡುವೆ ನಿರ್ಧರಿಸಲಾಗುತ್ತದೆ. ಬಡ್ತಿಗೆ ಸೂಕ್ತ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ನೇರನೇಮಕಾತಿ ಮೂಲಕ ಅಥವಾ ಇತರ ಯಾವುದೇ ಇಲಾಖೆಗಳಿಂದ ಪ್ರತಿಯೋಜನೆ ಮೂಲಕ. | **ಬಡ್ತಿಗಾಗಿ:**<br>1. ಲಘು ಮೋಟಾರು ವಾಹನಗಳ ಚಾಲನೆಗಾಗಿ ಚಾಲ್ತಿ ಚಾಲನಾ ಲೈಸೆನ್ಸ್ ಹೊಂದಿರಬೇಕು.<br>2. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು. |

(xiii) ಕ್ರ. ಸಂ. 39ರಲ್ಲಿ "ಪ್ಲಂಬರ್, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 39 | ಪ್ಲಂಬರ್ | ನೇರ ನೇಮಕಾತಿ ಮೂಲಕ | 1. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.<br>2. ಐ.ಟಿ.ಐ ನಲ್ಲಿ ಪ್ರಮಾಣ ಪತ್ರ ಹೊಂದಿರಬೇಕು. ಸರ್ಕಾರದಿಂದ ಮಾನ್ಯತೆ ಪಡೆದ ಪ್ಲಂಬರ್ ವಿಭಾಗದಲ್ಲಿ ಅಪ್ರೆಂಟಿಸ್‌ಷಿಪ್ ಆಗಿರಬೇಕು. |

(xiv) ಕ್ರ. ಸಂ. 40ರಲ್ಲಿ "ಎಲೆಕ್ಟ್ರೀಷಿಯನ್, ಕರ್ನಾಟಕ ಭವನ" ವೃಂದ ಮತ್ತು ಇದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 40 | ಎಲೆಕ್ಟ್ರೀಷಿಯನ್ | ನೇರ ನೇಮಕಾತಿ ಮೂಲಕ | 1. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.<br>2. ಐಟಿಐ ನಲ್ಲಿ ಪ್ರಮಾಣ ಪತ್ರ ಹೊಂದಿರಬೇಕು ಮತ್ತು ಸರ್ಕಾರವು ಮಾನ್ಯತೆ ನೀಡಿದ ಎಲೆಕ್ಟ್ರಿಷಿಯನ್ ವಿಭಾಗದಲ್ಲಿ ಅಪ್ರೆಂಟಿಸ್‌ಷಿಪ್ ಆಗಿರಬೇಕು. |

(xv) ಕ್ರ. ಸಂ. 41ರಲ್ಲಿರುವ "ಕುಕ್ – ದರ್ಜೆ–IIರ, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದನೆಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 41 | ಅಡುಗೆಯವ ದರ್ಜೆ–II | ಸಂಯೋಜಿತ ಜೇಷ್ಠತೆಯ ಆಧಾರದ ಮೇಲೆ ಅಡುಗೆ ಸಹಾಯಕ / ಪರಿಚಾರಕರು / ರೂಮ್ ಬಾಯ್ಸ್‌ಗಳ ಕರ್ನಾಟಕ ಭವನ ವೃಂದಗಳಿಂದ ಬಡ್ತಿ ಮೂಲಕ. ಬಡ್ತಿಗಾಗಿ ಸೂಕ್ತ ವ್ಯಕ್ತಿಗಳು ಲಭ್ಯವಿಲ್ಲದಿದ್ದಲ್ಲಿ ನೇರ ನೇಮಕಾತಿಯ ಮೂಲಕ. | **ಬಡ್ತಿಗಾಗಿ:** ಅಡುಗೆ ಸಹಾಯಕ ಮತ್ತು ರೂಮ್ ಬಾಯ್ಸ್/ಬೇರರ್ಸ್ ಕರ್ನಾಟಕ ಭವನದ ವೃಂದಗಳಲ್ಲಿ ಐದು ವರ್ಷಗಳಿಗೆ ಕಡಿಮೆಯಿಲ್ಲದಂತೆ ಸೇವೆ ಸಲ್ಲಿಸಿರಬೇಕು.<br>**ನೇರ ನೇಮಕಾತಿಗಾಗಿ:**<br>1. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br>2. ಸರ್ಕಾರದಿಂದ ಮಾನ್ಯತೆ ಪಡೆದ ಅತಿಥಿ ಗೃಹಗಳಲ್ಲಿ ಪಾಶ್ಚಾತ್ಯ ಹಾಗೂ ಭಾರತೀಯ ಶೈಲಿಯ ಅಡುಗೆ ಮಾಡುವ ಬಗ್ಗೆ ಮೂರು ವರ್ಷಗಳಿಗಿಂತ ಕಡಿಮೆಯಲ್ಲದ ಅನುಭವವನ್ನು ಹೊಂದಿರಬೇಕು; ಮತ್ತು<br>3. ಕನ್ನಡ ಮತ್ತು ಇಂಗ್ಲೀಷ್ ಭಾಷೆಯಲ್ಲಿರುವ ಮೆನುವನ್ನು ಓದಲು ಸಮರ್ಥನಾಗಿರಬೇಕು ಮತ್ತು ತದನುಸಾರವಾಗಿ ಆಹಾರವನ್ನು ಸಿದ್ಧಪಡಿಸಬೇಕು. |

(xvi) ಕ್ರ. ಸಂ. 42ರಲ್ಲಿ "ಜವಾನ / ರಾತ್ರಿ ಕಾವಲುಗಾರ, ಕರ್ನಾಟಕ ಭವನ" ಹುದ್ದೆಯ ಪ್ರವರ್ಗಗಳು ಮತ್ತು ಇದಕ್ಕೆ ಸಂಬಂಧಿಸಿದ ನಮೂದನೆಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 42 | ಸಮೂಹ–ಡಿ / ಜವಾನ / ರಾತ್ರಿ ಕಾವಲುಗಾರ | ನೇರ ನೇಮಕಾತಿಯ ಮೂಲಕ | **ನೇರ ನೇಮಕಾತಿಗಾಗಿ:**<br>1. ಕನ್ನಡವನ್ನು ಒಂದು ವಿಷಯವನ್ನಾಗಿ ಅಧ್ಯಯನ ಮಾಡಿ 7ನೇ ತರಗತಿಯ ಪರೀಕ್ಷೆಯಲ್ಲಿ ತೇರ್ಗಡೆಹೊಂದಿರಬೇಕು.<br>2. ಸರ್ಕಾರದಿಂದ ಮಾನ್ಯತೆ ಪಡೆದ ಅತಿಥಿ ಗೃಹಗಳಲ್ಲಿ ಅಥವಾ ಆತಿಥ್ಯ ಸಂಸ್ಥೆಗಳಲ್ಲಿ ಕನಿಷ್ಠ ಪಕ್ಷ ಮೂರು ವರ್ಷಗಳ ಅನುಭವ ಹೊಂದಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡತಕ್ಕದ್ದು |

(xvii) ಕ್ರಮ ಸಂಖ್ಯೆ 43 ರಲ್ಲಿ "ಮಾಲಿ / ಕಸಗುಡಿಸುವವನು, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದನೆಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಪ್ರತ್ಯಾಯೋಜಿಸತಕ್ಕದ್ದು ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 43 | ಮಾಲಿ / ಕಸಗುಡಿಸುವವನು | ನೇರ ನೇಮಕಾತಿಯ ಮೂಲಕ ಅಥವಾ ಪ್ರತಿನಿಯೋಜನೆಯ ಮೂಲಕ. | **ನೇರ ನೇಮಕಾತಿಗಾಗಿ:**<br>1. ಕನ್ನಡ ಭಾಷೆಯನ್ನು ಒಂದು ವಿಷಯವಾಗಿ ಅಧ್ಯಯನ ಮಾಡಿ 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.<br>2. ಕರ್ನಾಟಕ ಸರ್ಕಾರದ ತೋಟಗಾರಿಕಾ ಇಲಾಖೆಯು ನಡೆಸುವ ತರಬೇತಿಯನ್ನು ಪಡೆದಿರಬೇಕು. |

(xviii) ಕ್ರಮ ಸಂಖ್ಯೆ 44 ರಲ್ಲಿ "ಅಡುಗೆ ಸಹಾಯಕ, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದನೆಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 44 | ಅಡುಗೆ ಸಹಾಯಕ | ನೇರ ನೇಮಕಾತಿಯ ಮೂಲಕ | **ನೇರ ನೇಮಕಾತಿಗಾಗಿ:**<br>1. ಕನ್ನಡವನ್ನು ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿ 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು.<br>2. ಸರ್ಕಾರದಿಂದ ಮಾನ್ಯತೆ ಪಡೆದ ಅತಿಥಿಗೃಹಗಳಲ್ಲಿ ಪಾಶ್ಚಾತ್ಯ ಮತ್ತು ಭಾರತೀಯ ಶೈಲಿಯ ಅಡುಗೆ ಮಾಡುವ ಬಗ್ಗೆ ಎರಡು ವರ್ಷಗಳಿಗೆ ಕಡಿಮೆಯಿಲ್ಲದಂತೆ ಅನುಭವವನ್ನು ಹೊಂದಿರಬೇಕು; ಮತ್ತು<br>3. ಆಹಾರವನ್ನು ಸಿದ್ಧಪಡಿಸಲು ಮತ್ತು ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿರುವ ಮೆನುವನ್ನು ಓದಲು ಸಮರ್ಥನಾಗಿರಬೇಕು. |

(xix) ಕ್ರ. ಸಂ. 45ರಲ್ಲಿ "ರೂಮ್‌ಬಾಯ್ / ಪರಿಚಾರಕರು, ಕರ್ನಾಟಕ ಭವನ" ಹುದ್ದೆಯ ಪ್ರವರ್ಗ ಮತ್ತು ಇದಕ್ಕೆ ಸಂಬಂಧಿಸಿದ ನಮೂದನೆಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 45 | ರೂಮ್ ಬಾಯ್ / ಪರಿಚಾರಕರು | ನೇರ ನೇಮಕಾತಿಯ ಮೂಲಕ | **ನೇರ ನೇಮಕಾತಿಗಾಗಿ:**<br>1. ಕನ್ನಡ ಭಾಷೆಯನ್ನು ಒಂದು ವಿಷಯವಾಗಿ ಅಧ್ಯಯನ ಮಾಡಿ 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.<br>2. ಸರ್ಕಾರದಿಂದ ಮಾನ್ಯತೆ ಪಡೆದ ಹೋಟೇಲುಗಳಲ್ಲಿ ಅಥವಾ ಅತಿಥಿ ಗೃಹಗಳಲ್ಲಿ ರೂಮ್ ಬಾಯ್/ ಪರಿಚಾರಕರಾಗಿ ಎರಡು ವರ್ಷಗಳಿಗೆ ಕಡಿಮೆಯಿಲ್ಲದಂತೆ ಅನುಭವವನ್ನು ಹೊಂದಿರಬೇಕು.<br>3. ಕನ್ನಡ ಭಾಷೆಯನ್ನು ಓದಲು ಮತ್ತು ಬರೆಯಲು ಸಮರ್ಥನಾಗಿರಬೇಕು ಮತ್ತು ಅತಿಥಿಗಳಿಗೆ ಸೇವೆ ಸಲ್ಲಿಸಲು ಸಮರ್ಥನಾಗಿರಬೇಕು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ರಾಜ್ಯ ಶಿಷ್ಟಾಚಾರ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 26 ಹೆಚ್‌ಇಟಿ 2003, ಬೆಂಗಳೂರು, ದಿನಾಂಕ: 20.11.2012**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಎರಡನೇ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅಧಿಸೂಚನೆ–1 ಸಂ. ಡಿಪಿಎಆರ್ 55 ಹೆಚ್‌ಇಟಿ 1982, ದಿನಾಂಕ 22.05.1986ಕ್ಕೆ ಈ ಮುಂದಿನ ತಿದ್ದುಪಡಿಗಳನ್ನು ರಚಿಸುತ್ತದೆ, ಎಂದರೆ,–

ಸದರಿ ಅಧಿಸೂಚನೆಯಲ್ಲಿ "ಬಿ– ಕರ್ನಾಟಕ ಭವನ" ಉಪಶೀರ್ಷಿಕೆ ಮತ್ತು ಇದರ ಅಡಿಯಲ್ಲಿನ ನಮೂದುಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಪ್ರತ್ಯಾಯೋಜಿಸತಕ್ಕದ್ದು, ಎಂದರೆ:–

**'ಬಿ ಕರ್ನಾಟಕ ಭವನ"**

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಸಹಾಯಕ ಇಂಜಿನಿಯರ್ | 1 | ರೂ. 22,800 . . . . . 43,200 |
| 2 | ವ್ಯವಸ್ಥಾಪಕರು, ಕರ್ನಾಟಕ ಭವನ | 7 | ರೂ. 20,000 . . . . . 36,300 |
| 3 | ಕಿರಿಯ ಇಂಜಿನಿಯರ್ (ಎಲೆಕ್ಟ್ರಿಕಲ್) | 1 | ರೂ. 17,650 . . . . . 32,000 |
| 4 | ಸಹಾಯಕ ವ್ಯವಸ್ಥಾಪಕರು | 15 | ರೂ. 14,550 . . . . . 26,700 |
| 5 | ಹಿರಿಯ ಚಾಲಕ | 4 | ರೂ. 14,550 . . . . . 26,700 |
| 6 | ಸ್ವಾಗತಕಾರ / ಟೆಲಿಫೋನ್ ಆಪರೇಟರ್ | 24 | ರೂ. 11,600 . . . . . 21,000 |
| 7 | ದ್ವಿತೀಯ ದರ್ಜೆ ಸಹಾಯಕರು (ಶಿಷ್ಟಾಚಾರ) | 1 | ರೂ. 11,600 . . . . . 21,000 |
| 8 | ಎಲೆಕ್ಟ್ರಿಷಿಯನ್ ಕಮ್ ಪ್ಲಂಬರ್ | 1 | ರೂ. 11,600 . . . . . 21,000 |
| 9 | ಹಿರಿಯ ಎಲೆಕ್ಟ್ರೀಷಿಯನ್ | 1 | ರೂ. 11,600 . . . . . 21,000 |
| 10 | ಹಿರಿಯ ಪ್ಲಂಬರ್ | 1 | ರೂ. 11,600 . . . . . 21,000 |
| 11 | ಚಾಲಕ | 15 | ರೂ. 11,600 . . . . . 21,000 |
| 12 | ಅಡುಗೆಯವ ದರ್ಜೆ–I | 9 | ರೂ. 11,600 . . . . . 21,000 |
| 13 | ಎಲೆಕ್ಟ್ರಿಷಿಯನ್ | 3 | ರೂ. 10,400 . . . . . 16,400 |
| 14 | ಪ್ಲಂಬರ್ಸ್ | 3 | ರೂ. 10,400 . . . . . 16,400 |
| 15 | ಅಟೆಂಡರ್ಸ್ | 7 | ರೂ. 10,400 . . . . . 16,400 |

| ಕ್ರಮ ಸಂಖ್ಯೆ | ಹುದ್ದೆಯ ಪ್ರವರ್ಗ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 16 | ಅಡುಗೆಯವ ದರ್ಜೆ– II | 15 | ರೂ. 10,400 . . . . . 16,400 |
| 17 | ಅಡುಗೆ ಸಹಾಯಕ | 14 | ರೂ. 9,600 . . . . . 14,550 |
| 18 | ಜವಾನ / ರಾತ್ರಿ ಕಾವಲುಗಾರ / ಸಮೂಹ–ಡಿ | 12 | ರೂ. 9,600 . . . . . 14,550 |
| 19 | ಮಾಲಿ / ಕಸಗುಡಿಸುವವ | 8 | ರೂ. 9,600 . . . . . 14,550 |
| 20 | ರೂಮ್ ಬಾಯ್ / ಪರಿಚಾರಕರು | 48 | ರೂ. 9,600 . . . . . 14,550 |
| | **ಒಟ್ಟು** | **190** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ರಾಜ್ಯ ಶಿಷ್ಟಾಚಾರ)

## *PERSONNEL AND ADMINISTRATIVE REFORMS SECRETARIAT*

### *NOTIFICATION*

### *No. DPAR 26 HET 2003, Bangalore, dated: 20.11.2012*

Whereas the draft of the Karnataka General Services (Government Hospitality Organisation Recruitment)(Amendment) Rules, 2012 was published as required by Clause(a) sub-section(2) of section(3) of The Karnataka State Civil Services Act, 1978(Karnataka Act No. 14 of 1990) in Notification No. DPAR 26 HET 2003, dated 3rd October, 2012, in Part - IVA of the Karnataka Gazette Extraordinary dated 5th October, 2012, inviting objections and suggestions from all persons likely to be affected thereby within fifteen days from the date of its publication in Official Gazette.

And whereas the said Gazette was made available to public on the 5th October, 2012.

And whereas no objections and suggestions have been received in this behalf by the State Government.

Now, therefore in exercise of the powers conferred by sub-section(1) of section 3 read with section 8 of the Karnataka State Civil Services Act, 1978(Karnataka Act 14 of 1990) the Government of Karnataka hereby makes the following rules, namely:-

### *RULES*

***1. Title and commencement:-*** (1) These rules may be called the Karnataka General Services (Government Hospitality Organisation Recruitment) (Amendment ) Rules, 2012.

(2) They shall come into force from the date of their publication in the official Gazette.

***2. Amendment of Schedule.-*** In the Karnataka General Services (Government Hospitality Organization Recruitment) Rules, 1986, in the schedule, under the heading "B. Karnataka Bhavan":-

(i) in the entries relating to the category of post of Assistant Engineer-cum Assistant Manager Karnataka Bhavan, New Delhi at Sl No. 28 in column(2), for the words "Assistant Engineer - cum Assistant Manager, Karnataka Bhavan, New Delhi" the words "Assistant Engineer" shall be substituted;

(ii) after the Sl. No.28,and entries relating thereto the following shall be inserted, namely:-

| *Sl. No.* | *Category of Post* | *Method of Recruitment* | *Minimum Qualification* |
|---|---|---|---|
| 28A | Junior Engineer (Electrical) | By deputation of an officer in the cadre of Junior Engineer (Electrical) from the Karnataka Public Works Department Engineering Services | -- |

"

(iii) for the category of post of "Manager Karnataka Bhavan" at Sl.No.29 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 29 | Manager Karnataka Bhavan | By promotion from the cadre of Assistant Manager, Karnataka Bhavan | Must have put in a service of not less than five years in the cadre of Assistant Manager, Karnataka Bhavan |

"

(iv) for the category of post of "Steward Karnataka Bhavan" at Sl.No.30 and entries relating thereto, the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 30 | Assistant Manager | 33 percent by Direct Recruitment ; and 67 percent by promotion from the cadre of Receptionist/ Telephone operator, Karnataka Bhavan | ***For Direct Recruitment:***<br>1. Must be a holder of a Degree; and<br>2. Must be a holder of a Certificate in Catering or Housekeeping granted by an Institution of Catering recognized by Government, Preference shall be given to candidates possessing a Diploma in Catering or Housekeeping.<br><br>***For Promotion:***<br>Must have put in a service of not less than five years in the cadre of Receptionist/ Telephone Operator, Karnataka Bhavan. |

"

(v) the category of post of "Store Keeper Karnataka Bhavan" at Sl.No.31 and entries relating thereto shall be omitted.

(vi) for the category of post of "Receptionist Karnataka Bhavan" at Sl.No.32 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 32 | Receptionist/ Telephone Operator | Twenty five percent by Direct Recruitment; and<br><br>Seventy five percent by Promotion from the cadre of Attenders, Peon / Watchman, Room boys or any Group D post Karnataka Bhavan on the basis of combined seniority.<br>Seniority being determined by treating a person holding a post carrying higher scale of pay, as senior to a person holding a post carrying lower scale of pay. Seniority interse among persons holding post carrying same scale of pay being determined on the basis of length of service in the respective cadre. seniority interse among persons in a cadre being maintained. | ***For Direct Recruitment:***<br>1. Must have passed SSLC examination with Kannada as one subject or possess equivalent qualification;<br>2. must have passed Kannada Typewriting examination in Junior Grade conducted by KSEEB; and<br>3. must have been trained in PBX/PABX/EPABX from Government recognized Institutions.<br>***For Promotion:***<br>1. Must have put in a service of not less than five years in the cadres specified in column (3);<br>2. Must have passed SSLC Examination or possess equivalent qualification;<br>3. Must have been trained in PBX/PABX/EPABX from Government recognized Institutions; and<br>4. Must have passed Computer test prescribed by the Government. |

| Sl. No. | Category of Post | Method of Recruitment | Minimum Qualification |
|---|---|---|---|
| 32A | Second Division Assistant (Protocol) | By Deputation of an official in the cadre of Second Division Assistant from any of the State Civil Services. | |

"

(vii) The category of post of "Telephone operators Karnataka Bhavan" at Sl.No.33 and entries relating thereto shall be omitted.

(viii) for the category of post of "Senior Driver Karnataka Bhavan" at Sl.No.34 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 34 | Senior Driver | By promotion from the cadre of Drivers | Must have put in a service of not less than ten years from the cadre of Drivers. |

"

(ix) for the category of post of "Butler Grade-II Karnataka Bhavan" at Sl.No.35 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 35 | Cook Gr-I | By promotion from the cadre of Cook Grade-II. | 1. Must have put in a service of not less than five years in the cadre of Cook Grade-II; and<br>2. must be able to supervise cooking done by other cooks also, in addition to cooking himself. |

"

(x) for the category of post of "Electrician cum Plumber Karnataka Bhavan" at Sl.No.36 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 36 | Electrician-cum-Plumber, | By deputation of a Electrician cum Plumber in the equivalent cadre from the Central Public Works Department or Karnataka Public Works Engineering Department, New Delhi Municipal Committee or Delhi Development Authority | |
| 36 (a) | Senior Electrician | By promotion from the cadre of Electrician | Must have put in a service of not less than five years in the cadre of Electrician. |
| 36 (b) | Senior Plumber | By promotion from the cadre of Plumber | Must have put in a service of not less than five years in the cadre Plumber. |

"

(xi) for the category of post of "Attender Karnataka Bhavan" at Sl.No.37 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 37 | Attender | By promotion from any of the cadre of the Group D service below the post of Attender based on combined seniority.<br>Seniority interse among persons holding post carrying same scale of pay being determined on the basis of length of service in the respective cadre and seniority interse among persons in cadre being maintained. | Must have put in a service of not less than ten years in the cadre of Peon-cum-Watchmen / Gardner-cum-sweeper of Karnataka Bhavan. |

"

(xii) for the category of post of "Driver Karnataka Bhavan" at Sl.No.38 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 38 | Driver | Fifty percent by Direct Recruitment and Fifty percent by promotion from any of the cadres in Group D service on the basis of combined seniority.<br>Seniority being determined by treating a person holding a post carrying higher scale of pay as senior to a person holding a post carrying a lower scale of pay, seniority interse among persons holding post carrying same scale of pay being determined on the basis of length of service in the respective cadre and seniority interse among persons in cadre being maintained.<br>If no suitable person is available for promotion, then by direct recruitment or By deputation from any other Departments. | ***For Direct Recruitment:***<br>1. Must have passed SSLC Examination with Kannada as one subject or possesses equivalent qualification;<br>2. must be holders of current driving license for driving Light Motor Vehicles;<br>3. must have not less than three years of experience as Driver from an institution recognized by Government; and<br>4. must possess a First-Aid Certificate granted by an Institution recognized by the Government.<br>***For Promotion:***<br>1. Must be holder of a current driving license for driving Light Motor Vehicles; and<br>2. must have passed SSLC Examination or possesses equivalent qualification. |

"

(xiii) for the category of post of "Plumber Karnataka Bhavan" at Sl.No.39 and entries relating thereto the following shall be substituted, namely:-

"

| Sl. No. | Category of Post | Method of Recruitment | Minimum Qualification |
|---|---|---|---|
| 39 | Plumber | By direct recruitment | 1. Must have passed SSLC Examination or possesses equivalent qualification;<br>2. must be a holder of a Certificate in I.T.I. and Apprenticeship in the trade of Plumber recognized by the Government. |

"

